# ಕಲಾ

ವೈಚಾರಿಕ
ಸಾಹಿತ್ಯ-ಚಿತ್ರ
ಸಂಪುಟ 4

## ದೃಶ್ಯಕಲೆ: ಶಿಕ್ಷಣ ಮತ್ತು ಸಂಶೋಧನೆ

ಪ್ರಧಾನ ಸಂಪಾದಕರು

**ಡಾ. ಎಂ.ಎಸ್. ಮೂರ್ತಿ**

ಸಂಪಾದಕರು

**ರಾಜು ಮಳವಳ್ಳಿ**

**ಕರ್ನಾಟಕ ಲಲಿತಕಲಾ ಅಕಾಡೆಮಿ**
ಕನ್ನಡ ಭವನ, ಎರಡನೇ ಮಹಡಿ
ಜೆ.ಸಿ.ರಸ್ತೆ, ಬೆಂಗಳೂರು-೫೬೦ ೦೦೨
ದೂರವಾಣಿ:೦೮೦-೨೨೪೮೦೨೯೭
ಈ-ಮೇಲ್: kla.karnataka@gmail.com
www.lalitkalakarnataka.org/karnataka lalithakala academy

# ಕಲಾ

ವೈಚಾರಿಕ ಸಾಹಿತ್ಯ-ಚಿತ್ರ ಸಂಪುಟ 4
ದೃಶ್ಯಕಲೆ : ಶಿಕ್ಷಣ ಮತ್ತು ಸಂಶೋಧನೆ

ಸಂಚಿಕೆಯ ಸಂಪಾದನೆ : **ರಾಜು ಮಳವಳ್ಳಿ**
ಪ್ರಧಾನ ಸಂಪಾದಕರು : **ಡಾ.ಎಂ.ಎಸ್.ಮೂರ್ತಿ**

ಮೊದಲ ಮುದ್ರಣ : ಜನವರಿ-2017
ಪುಟಗಳು : 84 + 4
ಬೆಲೆ : ರೂ. 150/-
ಪ್ರತಿಗಳು: 1,000
ಮುಖಪುಟ ಚಿತ್ರ : ಡಿ.ಸಿ. ನಾಗೇಶ್

ಬಳಸಿದ ಕಾಗದ : 80 ಜಿಎಸ್‌ಎಂ ಎನ್‌ಎಸ್ ಬುಕ್ ಪ್ರಿಂಟ್

ಪ್ರಕಾಶಕರು
**ಇಂದ್ರಮ್ಮ ಹೆಚ್.ವಿ.**
ರಿಜಿಸ್ಟ್ರಾರ್
**ಕರ್ನಾಟಕ ಲಲಿತಕಲಾ ಅಕಾಡೆಮಿ**
ಕನ್ನಡ ಭವನ, ಎರಡನೇ ಮಹಡಿ
ಜೆ.ಸಿ. ರಸ್ತೆ, ಬೆಂಗಳೂರು-560 002
ದೂರವಾಣಿ : 080-22480297
**ಈ-ಮೇಲ್** : kla.karnataka@gmail.com
www.lalitkalakarnataka.org /
karnataka lalitha kala academy

**ಪ್ರಕಟಣಾ ಸಮಿತಿ**
ಶ್ರೀ ಬಾಗೂರು ಮಾರ್ಕಂಡೇಯ
ಶ್ರೀ ಬಿ.ಎಲ್.ಚವ್ಹಾಣ್
ಶ್ರೀ ಕೆ.ವಿ.ಸುಬ್ರಮಣ್ಯಂ
ಶ್ರೀ ರಾಜು ಮಳವಳ್ಳಿ

ಮುದ್ರಕರು
**ರೀಗಲ್ ಪ್ರಿಂಟ್ ಸರ್ವೀಸ್**
ಬೆಂಗಳೂರು-560 026
ದೂರವಾಣಿ : 99643 51655

## KALA CHITRA SAMPUTA 4

Edited by : **Raju Malavalli**
Chief Editor : **Dr.M.S.Murthy**

Published by
**Indramma.H.V**
Registrar
**Karnataka Lalitha Kala Academy,**
2nd Floor, Kannada Bhavana,
J.C.Road, Bengaluru-560 002,
Ph:080-22480297
**Email :** kla.karnataka@gmail.com
www.lalitkalakarnataka.org/
karnataka lalithakala academy

First Edition : 2017

Pages: 84 + 4
Price : **Rs. 150/-**
Used Paper : 80 gsm NS Book Print
Copies : 1000

*Printed at*
**Reegal Print Service**
Bengaluru-560 026
Ph. 9964351655

## ಪ್ರಧಾನ ಸಂಪಾದಕರ ನುಡಿ

ಕರ್ನಾಟಕದಲ್ಲಿ ದೃಶ್ಯಕಲೆಯ ಕುರಿತಂತೆ ಸುಮಾರು 66 ಪಿಎಚ್.ಡಿ.ಗಳು, 7 ಡಿ.ಲಿಟ್‌ಗಳು ಹಾಗೂ 64 ಎಂ.ಫಿಲ್ ಸಂಪ್ರಬಂಧಗಳು ವಿಶ್ವವಿದ್ಯಾಲಯದಲ್ಲಿ ಸಲ್ಲಿಕೆಯಾಗಿವೆ. ಡಾ. ಎಸ್ ಸಿ ಪಾಟೀಲರು ಈ ಕುರಿತು ಮಾಹಿತಿ ನೀಡುತ್ತಾರೆ. ಅಂದರೆ ಈ ಅಂಕಿ ಅಂಶಗಳ ಮೂಲಕ ಇಷ್ಟು ದೊಡ್ಡಮಟ್ಟದ ಕಲೆಯ ಕುರಿತ ಸಂಶೋಧನೆ, ಅಧ್ಯಯನಗಳು ಶೈಕ್ಷಣಿಕವಾಗಿ ನಡೆದಿವೆ ಎಂದು ನಮಗೆ ತಿಳಿಯುತ್ತದೆ. ಸುಮಾರು 30 ವರ್ಷಗಳ ಹಿಂದೆ ನಮ್ಮ ಕಲಾ ವಲಯದಲ್ಲಿ ಕಾಣಸಿಗದ 'ಡಾಕ್ಟರ್'ಗಳು, ಸಂಶೋಧಕರು ಈಗ ಹೆಚ್ಚೆಚ್ಚು ನಮ್ಮ ಗಮನ ಸೆಳೆಯುತ್ತಿದ್ದಾರೆ. ಕೇವಲ ಅಂಕಿ ಅಂಶದ ದೃಷ್ಟಿಯಿಂದ ನಾವು ಈ ಕುರಿತು ಹೆಮ್ಮೆ ಪಡಬಹುದಾದರೂ ದೃಶ್ಯಕಲೆಯ ತಾತ್ವಿಕತೆ, ಮೌಲ್ಯ, ಮೀಮಾಂಸೆಗಳ ಕುರಿತಂತೆ ನಮ್ಮ ಒಳನೋಟ, ಅರಿವು, ಸ್ಪಷ್ಟತೆಗಳು ನಮ್ಮ ಆಲೋಚನೆಗಳನ್ನು ಬೆಳೆಸದೇ ಇನ್ನೂ ಮುಸುಕಾಗಿಯೇ ಇರುವುದನ್ನು ನಾವು ಕಾಣಬಹುದು.

ಕನಿಷ್ಟ ಕಲಾಶಿಕ್ಷಣದ ದೃಷ್ಟಿಯಿಂದಲಾದರೂ ದೃಶ್ಯಕಲೆಯ ಆಧುನಿಕ ಒಲವು-ನಿಲುವುಗಳ ಬಗ್ಗೆ ನಮ್ಮ ಗ್ರಾಮೀಣ ನೆಲೆಯ ವಿದ್ಯಾರ್ಥಿಗಳ ತಿಳುವಳಿಕೆಯನ್ನು ಹೆಚ್ಚಿಸಬಹುದಾದ ಅವಕಾಶಗಳಿಗೆ ಗಮನ ಕೊಡಬಹುದಿತ್ತು. ಕೇವಲ ಕಲಾಕೃತಿಗಳ 'ರಚನಾ ಕೌಶಲ್ಯ' ವನ್ನೇ ಕಲೆ ಎಂದು ಪರಿಗಣಿಸಿ 'ಕಲಾಶಿಕ್ಷಣ' ಬಹುದೂರ ಸಾಗಿ ಬಂದಿದೆ. ಕಲಾಮಾಧ್ಯಮವು ಭೌದ್ಧಿಕ ನೆಲೆಯನ್ನು ಆತುಕೊಂಡಿದೆಯೋ ಅಥವಾ ಅದರ ಅಗತ್ಯವಿಲ್ಲದೇ ಕೃತಿ ರಚನೆಯ ಕೈಕಸುಬಿನ ರಾಚನಿಕ ಕ್ರಿಯೆಯಷ್ಟೇ ಅದರ ಅಂತಿಮ ಆಶಯ, ಧ್ಯೇಯವೋ ಇತ್ಯಾದಿ ಜಿಜ್ಞಾಸೆಗಳಿಗೆ ನಾವು ಇನ್ನೂ ಸ್ಪಷ್ಟ ಉತ್ತರ ಹುಡುಕುವ ಪ್ರಯತ್ನದಲ್ಲಿದ್ದೇವೆ.

ಕರ್ನಾಟಕ ಲಲಿತಕಲಾ ಅಕಾಡಮಿಯ 50ನೇ ವರ್ಷದ ಸುವರ್ಣ ಸಂಭ್ರಮದ ಅವಧಿಯಲ್ಲಾದರೂ ದೃಶ್ಯಕಲೆಯ ಚಿಂತನೆಯ ದೃಷ್ಟಿಯಿಂದ, ಶೈಕ್ಷಣಿಕ ಅಗತ್ಯಗಳಲ್ಲೊಂದಾದ ವಿಚಾರಸಂಕಿರಣ, ಕಮ್ಮಟಗಳು ಕಲಾವಿದ್ಯಾರ್ಥಿಗಳಿಗೆ ವಿಷಯ ಕುತೂಹಲವನ್ನು ಹೆಚ್ಚಿಸಬಹುದು ಆ ಮೂಲಕ ನಮ್ಮ ಸ್ಥಳೀಯ ಕಲಾ ಸಂವೇದನೆಯ ನೆಲೆಯಲ್ಲಿಯೇ ಆಧುನಿಕ ಕಲಾವಿನ್ಯಾಸದ ಅನೇಕ ಕ್ಲೀಷೆಗಳಿಗೆ, ಪ್ರಶ್ನೆಗಳಿಗೆ, ಜಿಜ್ಞಾಸೆಗಳಿಗೆ ಉತ್ತರವನ್ನು ಕಂಡುಕೊಳ್ಳಬಹುದು.

ದೇಸೀ ನೆಲೆಯ ಜ್ಞಾನ ಶಿಸ್ತನ್ನು ಆಧುನಿಕವಾಗಿ ದುಡಿಸಿಕೊಳ್ಳಬಲ್ಲ, ಸಾಮರ್ಥ್ಯವನ್ನು ಹೆಚ್ಚಿಸಬಲ್ಲ ಇಂತಹ ಪ್ರಯೋಗಗಳು ಇವತ್ತಿನ ಕಲಾ ಸಂದರ್ಭದಲ್ಲಿ ಬಹಳ ಮುಖ್ಯ ಮತ್ತು ಅಗತ್ಯ. ಈ ನಂಬಿಕೆಯಿಂದಲೇ ಅಕಾಡಮಿಯ ರಾಜ್ಯದ ಇತರ ಭಾಗದಲ್ಲೂ ಕಲೆಯ ಕಮ್ಮಟಗಳನ್ನೂ ವಿಚಾರಸಂಕಿರಣಗಳನ್ನೂ ಆಯೋಜಿಸುತ್ತಿದೆ. ಅದರಲ್ಲಿ ಸಾಂಸ್ಕೃತಿಕ ನಗರವಾದ ಧಾರವಾಡದಲ್ಲಿ ನಡೆದ ಕಲೆ ಮತ್ತು ಸಂಶೋಧನೆ ಎಂಬ ವಿಚಾರಸಂಕಿರಣವು ಈ ಎಲ್ಲಾ ದೃಷ್ಟಿಯಿಂದ ಗಮನಾರ್ಹವಾದುದು. ಇಲ್ಲಿ ಹೆಚ್ಚಿನ ಸಂಶೋಧಕರು, ವಿದ್ಯಾರ್ಥಿಗಳು, ಕಲಾಶಿಕ್ಷಕರು ಭಾಗವಹಿಸಿದ್ದು ಒಂದು ವಿಶೇಷವೇ. ಅದರ ಎಲ್ಲಾ ಮಾಹಿತಿ ನಮ್ಮ ಓದುಗರಿಗೆ 'ಕಲಾ' ಸಂಪುಟದ ಮೂಲಕ ತಲುಪಿ ಉಪಯುಕ್ತವಾಗಬಹುದೆಂಬ ಆಶಯ ನಮ್ಮದು.

**ಡಾ. ಎಂ.ಎಸ್.ಮೂರ್ತಿ**

ಅಧ್ಯಕ್ಷರು

ಕರ್ನಾಟಕ ಲಲಿತಕಲಾ ಅಕಾಡೆಮಿ

# ಸಂಪಾದಕರ ಮಾತು...

## ಹೊಸಬೆಳಕಿನ ಝರಿ

'ಸತ್ಯ ಮೇವ ಜಯತೆ' ಎಂಬುದು ಸಾರ್ವಕಾಲಿಕ ಮೌಲ್ಯ. ಸತ್ಯವೆಂಬುದು ತಡವಾಗಿ ಯಾದರೂ ಗೆದ್ದೇ ಗೆಲ್ಲುತ್ತದೆ ಎಂಬ ನಂಬಿಕೆ ಮತ್ತು ಅನುಭವ ಜೀವನದರ್ಶನದ ಪ್ರತೀಕ. ಸುಳ್ಳು ವಿಜೃಂಭಿಸುತ್ತದೆ, ಸದ್ದು ಮಾಡುತ್ತದೆ. ಆದರೆ, ಸತ್ಯ ತಣ್ಣಗೆ ಮೌನದ ಹೊದಿಕೆ ಹೊದ್ದುಕೊಂಡು ಇರುತ್ತದೆ. ಸತ್ಯದ ದರ್ಶನವೆಂಬುದು ನೈಜ ಹುಡುಕಾಟ. ಅಗೆದಷ್ಟೂ ಆಳ, ಕುದ್ದಷ್ಟೂ ಅಪರಂಜಿ. ಸುಳ್ಳು-ಅಸತ್ಯಗಳ ಪೊರೆಯನ್ನು ತೆಗೆದು ಸತ್ಯವನ್ನು ಹೆಕ್ಕಿ ತೆಗೆಯಬೇಕು. ಅಂತಹ ಸತ್ಯದ ಶೋಧನೆಯೇ ಸಂಶೋಧನೆ. ಸಂಶೋಧನೆ ಅರ್ಥಾತ್ ಸತ್ಯದ ಶೋಧನೆ ಎಲ್ಲಾ ಕ್ಷೇತ್ರಕ್ಕೆ ಅವಶ್ಯಕ. ದೃಶ್ಯಕಲೆ ಸಹ ಇದರಿಂದ ಹೊರತಾಗಿಲ್ಲ.

ದೃಶ್ಯಕಲೆಯ ಇತಿಹಾಸವನ್ನು ಪುನರ್ ರೂಪಿಸುವ ಕಾರ್ಯ ಸಂಶೋಧನೆಯಿಂದ ಮಾತ್ರ ಸಾಧ್ಯ. ಜನಪದ ಎಲ್ಲಾ ಕಲೆಗಳ ಮೂಲಬೇರು. ಹಾಗಾಗಿ ಜನಪದದ ಬೇರಿನಲ್ಲಿ ಎಲ್ಲಾ ಕಲೆಗಳ ನೈಜ ಇತಿಹಾಸ ಅಡಗಿರುವುದು ದಿಟ. ಅಂತಹ ಇತಿಹಾಸವನ್ನು ಕೆಣಕಲು ಶಿಕ್ಷಣ ಬಲು ಅವಶ್ಯಕ. ಕಲಾಶಿಕ್ಷಿತ ಮತ್ತು ಕಲಾವಿದ ಕಲೆಯ ಇತಿಹಾಸವನ್ನು ಕೆಣಕಲೂ ಬಲ್ಲ, ರೂಪಿಸಲೂ ಬಲ್ಲ, ಹೊಸ ಇತಿಹಾಸ ಸೃಷ್ಟಿಸಲೂ ಬಲ್ಲ. ಹಾಗಾಗಿ ಕಲಾ ಶಿಕ್ಷಣ ಮತ್ತು ಸಂಶೋಧನೆ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದರನ್ನೊಂದು ಬಿಟ್ಟಿರದು, ಬಿಡಲೊಲ್ಲದು.

ದೃಶ್ಯಕಲೆಯ ಉನ್ನತೀಕರಣದ ದೃಷ್ಟಿಯಿಂದ ಬಲು ಮುಖ್ಯವೆನಿಸಿರುವ ಕಲಾಶಿಕ್ಷಣ ಮತ್ತು ಸಂಶೋಧನೆಯ ವಿವಿಧ ಆಯಾಮಗಳ ಮೇಲೆ ಬೆಳಕು ಚೆಲ್ಲುವಂತಹ ಕೈಂಕರ್ಯಕ್ಕೆ ಕರ್ನಾಟಕ ಲಲಿತಕಲಾ ಅಕಾಡೆಮಿ ಮುಂದಾಗಿದ್ದು ಸಂತೋಷಕರ ಬೆಳವಣಿಗೆ.

ಈ ಬೆಳವಣಿಗೆಗೆ ಸಾಂಸ್ಕೃತಿಕ ನಗರಿಯೆಂದೇ ಹೆಸರಾಗಿರುವ ಧಾರವಾಡ ಸಾಕ್ಷಿಯಾಗಿದ್ದು ವಿಶೇಷ. 2016ರ ಜುಲೈ 5 ಮತ್ತು 6ರಂದು ಧಾರವಾಡದಲ್ಲಿ ನಡೆದ 'ದೃಶ್ಯಕಲೆ-ಶಿಕ್ಷಣ ಮತ್ತು ಸಂಶೋಧನೆ' ವಿಚಾರಸಂಕಿರಣದಲ್ಲಿ ಹರಿದ ವಿಚಾರಧಾರೆಗಳು ಅನೇಕ. ಕಲಾ ಶಿಕ್ಷಣ ಮತ್ತು ಸಂಶೋಧನೆಗೆ ಸಂಬಂಧಿಸಿದ ಹಲವು

ಸೂಕ್ಷ್ಮ ಸಂಗತಿಗಳ ಮೇಲೆ ವಿಷಯತಜ್ಞರು ಬೆಳಕು ಚೆಲ್ಲಿದ್ದು ಚಿಂತನೆಯ 'ಹೊಸಬೆಳಕ'ನ್ನೇ ಹರಿಸಿತು. ಆ ಬೆಳಕಿನ ಝುರಿಯನ್ನು ಅಕ್ಷರದ ಅಂಗಳದಲ್ಲಿ ಹಾಸಿ ಗ್ರಂಥರೂಪದಲ್ಲಿ 'ಕಲಾ' ವೈಚಾರಿಕ ಸಾಹಿತ್ಯ-ಚಿತ್ರ ಸಂಪುಟದ ನಾಲ್ಕನೇ ಸಂಚಿಕೆಯಾಗಿ ಹೊರ ತರಲಾಗಿದೆ.

ಈ ಕೃತಿಯಲ್ಲಿರುವ ಪ್ರಬಂಧಗಳು ಆಯಾ ಲೇಖಕರು, ಕಲಾಚಿಂತಕರ ಸಂಶೋಧನೆಯ ಸಾರವಾಗಿದೆ. ಕಲಾ ಶಿಕ್ಷಣ ಮತ್ತು ಸಂಶೋಧನೆ ಕುರಿತ ಅನೇಕ ಒಳನೋಟಗಳು-ಹೊಸ ಹೊಸ ಹೊಳಹುಗಳು ಇಲ್ಲಿದ್ದು ಓದುಗ ಕಲಾಪ್ರೇಮಿ, ಕಲಾವಿದರಿಗೆ ಸತ್ಯದ ಹೊಸ ದರ್ಶನ ಮಾಡಿಸುವುದು ನಿಜ. ಈ ಅಮೂರ್ತ ದರ್ಶನಕ್ಕೆ ಮೂರ್ತ ಪರಿಕರಗಳನ್ನು ಸಂಕಲಿಸುವ ಹೊಣೆ ಸಂಪಾದಕನಾಗಿ ನನ್ನದು. ಕರ್ನಾಟಕ ಲಲಿತಕಲಾ ಅಕಾಡೆಮಿಯು ಈ ಸಾರ್ಥಕ ಕೆಲಸದ ಹಿಂದೆ ಅಕಾಡೆಮಿ ಅಧ್ಯಕ್ಷರು, ರಿಜಿಸ್ಟ್ರಾರ್ ಸೇರಿದಂತೆ ಹಲವರ ಶ್ರಮವಿದೆ. ಅವರೆಲ್ಲರನ್ನೂ, ಪುಸ್ತಕದ ಮುದ್ರಕರು ಮತ್ತು ಲೇಖಕರೆಲ್ಲರನ್ನೂ ನೆನೆಯುವುದು ನನ್ನ ಆದ್ಯ ಕರ್ತವ್ಯ. ಈ ಕೃತಿ ಕೇವಲ ಆಸ್ವಾದನೆಗೆ ಸೀಮಿತವಾಗದೆ ಕಲಾ ಸಂಶೋಧನೆಯೆಡೆಗೆ ಆಸಕ್ತಿ ಅರಳಿಸಿದರೆ ಅಕಾಡೆಮಿಯ ಬಳಗಕ್ಕೆ ಧನ್ಯತಾ ಭಾವದ ಮೆರುಗು.

**ರಾಜು ಮಳವಳ್ಳಿ**
ಸಂಪಾದಕರು

## ಪರಿವಿಡಿ

# ದೃಶ್ಯಕಲಾ ಸಂಶೋಧನೆಯಲ್ಲಿ ಕಲಾ ಇತಿಹಾಸದ ಸಾಧ್ಯತೆಗಳು

♦ ಡಾ.ಆರ್.ಎಚ್.ಕುಲಕರ್ಣಿ

ದೃಶ್ಯಕಲಾ ಸಂಶೋಧನೆ-ಇಂದು ಹಲವಾರು ಹೊಸದಾದ ಆಯಾಮಗಳನ್ನು ಸೃಷ್ಟಿಸುತ್ತಿದೆ. ಅಲ್ಲದೇ ಈ ಹಿಂದಿನ ಕಲೆಯ ಬೆಳವಣಿಗೆಯನ್ನು, ಅದಕ್ಕೆ ಕಾರಣರಾದ ಕಲಾವಿದರ, ಕಲಾತತ್ವಜ್ಞರ, ಕಲಾ ಇತಿಹಾಸಕಾರರ ಹಾಗೂ ಕಲಾ ಇತಿಹಾಸದ ಕುರಿತಾಗಿ ಅತ್ಯಂತ ವಿವರವಾದ ಹೊಸಬೆಳಕನ್ನು ಚೆಲ್ಲುವ ರೀತಿಯಲ್ಲಿ ಕಾರ್ಯೋನ್ಮುಖ ವಾಗಿದೆ.

ದೃಶ್ಯಕಲೆ ಭಾರತದ ಮತ್ತು ವಿಶ್ವದ ಅತ್ಯಂತ ಪ್ರಾಚೀನವಾದ ದೃಶ್ಯ ಭಾಷೆಯಾಗಿ ಬೆಳೆದಿದೆ. ಪ್ರಾಯಶಃ ಭಾಷೆಯ-ಅರ್ಥಪೂರ್ಣ ವಾದ ಶಬ್ದದ ಕೊರತೆಯ ಹಿನ್ನೆಲೆಯಲ್ಲಿ ಅತ್ಯಂತ ಪ್ರಭಾವಿಯಾದ ಸಂವಹನ ಮಾಧ್ಯಮವಾಗಿ ಚಿತ್ರಕಲೆ ಬೆಳೆದುಬಂದಿದೆ. ದೃಶ್ಯಭಾಷೆ-ಚಿತ್ರ ಭಾಷೆಯಾಗಿ ಅಂದಿನ ಜನರ ಮಧ್ಯದಲ್ಲ -ಸಮುದಾಯಗಳಮಧ್ಯದಲ್ಲಿ ಪರಸ್ಪರ ಸಂವಹನದ ಕೊಂಡಿಯಾಗಿತ್ತು. ಈ ಕುರಿತು ದೇಶ-

ದೃಶ್ಯಕಲೆಯ ಸಂಶೋಧನೆಗೆ ಹೊಸ ಆಯಾಮ ದೊರೆತಿದ್ದು ಕಳೆದ ಶತಮಾನದಿಂದಲೆ ಎನ್ನಬಹುದು. ಭಾರತದ ಸ್ವಾತಂತ್ರ್ಯಪೂರ್ವದಲ್ಲಿಯೇ ಅಂದಿನ ಆಧುನಿಕ ಕಲೆಯ ಕುರಿತಾಗಿ ಆಸಕ್ತಿ ಹಾಗೂ ಲೇಖನ ಪ್ರಕಟಣೆಗಳು ಪ್ರಾರಂಭವಾದವು. ಹಾಗೆಯೇ ಅದಕ್ಕಿಂತಲೂ ಅರ್ಧ ಶತಮಾನ ಮೊದಲಿಗೆ ಭಾರತೀಯ ಪ್ರಾಚೀನ ಕಲಾ ಪ್ರಕಾರಗಳ ಕುರಿತಾದ ವಿದ್ವತ್ಪೂರ್ಣವಾದ ಸಂಶೋಧನೆಗಳು ಮೊದಲುಗೊಂಡವು. ಭಾರತೀಯ ಕಲಾ ಇತಿಹಾಸ ಹಾಗೆ ನೋಡಿದರೆ ವ್ಯವಸ್ಥಿತವಾಗಿ ಬೆಳವಣಿಗೆಯಾಗಿದ್ದು 1950ರ ದಶಕದಿಂದ. ಅದಕ್ಕೂ ಮೊದಲು ಬಂದಂತಹ ಕಲಾ ಇತಿಹಾಸ ಸಾಹಿತ್ಯವು ಐರೋಪ್ಯ ವಿದ್ವಾಂಸರ ಪ್ರಭಾವಿತವಾಗಿರುವಂತಹದು ಎಂದು ಸ್ಥೂಲವಾಗಿ ಹೇಳಬಹುದು.



ವಿದೇಶಗಳಲ್ಲಿನ ಹಲವಾರು ಪ್ರಾಗೈತಿಹಾಸಿಕ ಕಲಾನೆಲೆಗಳು ಉತ್ತಮ ಉದಾಹರಣೆಗಳಾಗಿವೆ. ಆರಂಭದಲ್ಲಿನ ಸಂವಹನಾತ್ಮಕವಾದ ದೃಶ್ಯಕಲೆ ಕಾಲಾನಂತರದಲ್ಲಿ ವೈಚಾರಿಕತೆಯ ಮೆಟ್ಟಿಲಲ್ಲಿ ಒಂದಾಗಿ ತನ್ನದೇ ಅಸ್ತಿತ್ವವನ್ನು ಅಭಿವೃದ್ಧಿಗೊಳಿಸುವತ್ತ ದಾಪುಗಾಲು ಹಾಕಿದೆ.

ದೃಶ್ಯಕಲೆಯ ಅಭಿವೃದ್ಧಿ ಮತ್ತು ಬೆಳವಣಿಗೆ ಹಾಗೂ ಅದರ ಹೊಸ ಹೊಸ ಆಯಾಮಗಳನ್ನು ಹಾಗೂ ಬೆಳವಣಿಗೆಯ ಹಂತಗಳನ್ನು ಕಾಲಾನುಕ್ರಮಣಿಕೆಯಲ್ಲಿ ಗುರುತಿಸುವ ಪ್ರಯತ್ನವು ಕಲಾ ಇತಿಹಾಸದ್ದು. ದೃಶ್ಯಕಲೆಯ ಪ್ರಗತಿಯ ಜೊತೆ-ಜೊತೆಯಲ್ಲಿಯೇ ಅದರ ಕುರಿತಾದ ಚಿಂತನ-ಮಂಥನಕ್ಕೆ ಎಡೆಮಾಡಿಕೊಡುವ ಪ್ರಕ್ರಿಯೆಯೇ ಕಲಾ ಇತಿಹಾಸವಾಗಿ ಬೆಳೆದುಬಂದಿತು.

ಇತಿಹಾಸಕ್ಕೂ-ಕಲಾ ಇತಿಹಾಸಕ್ಕೂ ಮಧ್ಯೆ ಅತ್ಯಂತ ಸೂಕ್ಷ್ಮವಾದ ತೆಳುವಾದ ಪದರವಿದೆ. ವಾಸ್ತವಿಕವಾಗಿ ತೋರಿಕೆಗೆ ಇವೆರಡೂ ಒಂದೇ ಎನಿಸಿದರು-ಕಲಾಇತಿಹಾಸದ ಆಂತರ್ಯದ ಅಧ್ಯಯನವು ಕಲಾಕೃತಿಗಳನ್ನು ಆಶ್ರಯಿಸಿರುತ್ತದೆ.

ಸಂಶೋಧನೆ-ಅರ್ಥವ್ಯಾಪ್ತಿಯನ್ನು ಅರ್ಥೈಸಿದಾಗ-ಸಂಶೋಧನೆಯನ್ನು ಸ್ಥೂಲವಾಗಿ

**ಭಾರತೀಯ ಕಲೆಯ ಬಗ್ಗೆ ದೊರೆಯುವ ಕಲಾ ಸಾಹಿತ್ಯದ ಅಂದಾಜು ಅಂಕಿ ಅಂಶ**

- Indian Art
  Combine periodical articles in on
- Books(13,153)
- Academic journals(1,202)
- Magazines(3,344)
- Newspapers(12,819)
- Encyclopedia(65)



ಹುಡುಕಾಟ ವೆನ್ನಬಹುದು. ಯಾವುದೇ ವಿಷಯ-ವಸ್ತುವಿರಲಿ ಅದರಲ್ಲಿ ಹೊಸತನವನ್ನು ಗುರುತಿಸುವ ಸೂಕ್ಷ್ಮಮತಿಯ-ಅನ್ವೇಷಣಾ ಮನೋಭಾವವನ್ನು ಪ್ರಚುರಪಡಿಸುವದಾಗಿರುತ್ತದೆ.

ದೃಶ್ಯಕಲೆಯಲ್ಲಿ-ಚಿತ್ರಕಲೆ-ಶಿಲ್ಪ-ವಾಸ್ತು-ಪ್ರಾಚೀನ-ಅರ್ವಾಚೀನ ಕಾಲಗಳು ಹಾಗೂ ಜಾನಪದ, ಬುಡಕಟ್ಟು ಹಾಗೂ ಕಲಾ ಇತಿಹಾಸ ಅಧ್ಯಯನವನ್ನು ದೃಶ್ಯಕಲಾ ಅಧ್ಯಯನದಲ್ಲಿ ನೋಡಲಾಗುತ್ತದೆ.





ಬಿಂಬೇಟಕಾ ಪ್ರಾಗೈತಿಹಾಸಿಕ ಗುಹಾ ಚಿತ್ರಗಳ ಸಂಶೋಧನೆ- ಭಾರತೀಯ ಪ್ರಾಗೈತಿಹಾಸಿಕ ಕಾಲದ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತದೆ. ಡಾ. ವಾಕಣಕರ್- ರವ ಶೋಧನೆ.

ದೃಶ್ಯಕಲೆಯ ಬೆಳವಣಿಗೆ ಅದರ ಅವಿಭಾಜ್ಯ ಅಂಗವಾಗಿರುವ ಕಲಾ ಕೃತಿಗಳ ನಿರ್ಮಾಣ-ರಚನೆಗಳು ಆಯಾ ಸಾಮಾಜಿಕ-ಸಾಂಸ್ಕೃತಿಕ ಚೌಕಟ್ಟಿನೊಳಗೆ ಮಾಡಲ್ಪಡುತ್ತವೆ. ಕಲಾಕೃತಿಗಳು ಆಯಾ ಸಮಾಜದ ಸಾಂಸ್ಕೃತಿಕ ಪ್ರತಿನಿಧಿಗಳಾಗಿವೆ. ಒಂದು ಕಲಾಕೃತಿಯ ರಚನೆಯ ಮೇಲೆ



ಬಿಂಬೇಟಕಾ ಪ್ರಾಗೈತಿಹಾಸಿಕ ಗುಹಾ ಚಿತ್ರಗಳ ಸಂಶೋಧನೆ- ಭಾರತೀಯ ಪ್ರಾಗೈತಿಹಾಸಿಕ ಕಾಲದ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತದೆ.

ಯುರೋಪಿನ ಪ್ರಗೈತಿಹಾಸಿಕ ಕಲೆಗೆ ಸಮಕಾಲೀನ ಕಾಲಘಟ್ಟವನ್ನು ಸ್ರಚಿಸುತ್ತವೆ. .



ಸಮಕಾಲೀನ ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ-ಧಾರ್ಮಿಕವಾದ ಪ್ರಭಾವವನ್ನು ಗಮನಿಸ ಬಹುದಾಗಿದೆ. ಕಲಾಕೃತಿಗಳನ್ನು ಒಟ್ಟಾಗಿ ಒಂದು ಸಾಮಾಜಿಕ ಚೌಕಟ್ಟಿನಲ್ಲಿ ನೋಡುವುದು,

ಸಿಂಧು ನದಿ ಪಾತ್ರದ ಸಂಸ್ಕೃತಿಯ ಶೋಧನೆ- ಭಾರತದ ಅತ್ಯುತ್ತಮವಾದ ನಾಗರಿಕತೆಯನ್ನು ಅನಾವರಣಗೊಳಸುತ್ತದೆ
ಹರಪ್ಪಾ-ಮೆಹೆಂಜೋದಾರೊ-ಲೋಥಲ್-ಧೋಳಾವಿರಾ-ಬಿರ್ಡಾನಾ ಗಳು ಕ್ರಿ ಪೂ 8,000 ವರ್ಷಗಳ ಪ್ರಾಚೀನ ಇತಿಹಾಸವನ್ನು ಸಂಸ್ಕೃತಿಯನ್ನು ಸೂಚಿಸುತ್ತವೆ.













ಅವುಗಳ ಉಗಮ-ವಿಕಾಸವನ್ನು ಅನ್ವೇಷಿಸುವ-ಒಂದು ಸಂಪೂರ್ಣ ಪ್ರಕ್ರಿಯೆಯೇ ಸಂಶೋಧನೆಯಾಗುತ್ತದೆ. ಇವುಗಳನ್ನು ಗುರುತಿಸಿ-ವಿವರಿಸುವ ಕೆಲಸವು ಕಲಾ ಇತಿಹಾಸದ್ದು.



ಭಾರತದಲ್ಲಿ ಕಲಾ ಇತಿಹಾಸದ ಅಧ್ಯಯನ ಪ್ರಾರಂಭವು ಕಳೆದ ಶತಮಾನದ ಆರಂಭದಲ್ಲಿ ಪ್ರಾರಂಭವಾಯಿತು. ಪಾಶ್ಚ್ಯಾತ್ಯರಲ್ಲಿ-ವಿಶೇಷವಾಗಿ ಗ್ರೀಕೋ-ರೋಮನ್ ಕಲಾಕೃತಿಗಳನ್ನು ಅಧ್ಯಯನ ಕೈಗೊಳ್ಳುವುದರೊಂದಿಗೆ ಆ ಪ್ರದೇಶದ ಕಲಾಪ್ರಕಾರಗಳ ಅಧ್ಯಯನ-ಸಂಶೋಧನೆಯು ಪ್ರಾರಂಭವಾಯಿತು. ಅಂತೆಯೇ-ಭಾರತದಲ್ಲಿನ ಪ್ರಾಚೀನ ದೃಶ್ಯಕಲಾ














ಆನಂದ ಕುಮಾರಸ್ವಾಮಿ ಭಾರತೀಯ ಕಲಾ ಇತಿಹಾಸ-ದೃಶ್ಯಕಲಾ ಸಂಶೋಧನೆ-ಅಧ್ಯಯನಕ್ಕೆ ಮುನ್ನುಡಿಯನ್ನು ಬರೆದರು

ಪರಂಪರೆಯ ಅಧ್ಯಯನವೂ ಕಲಾ ಇತಿಹಾಸಕಾರರಿಂದ, ಭಾರತೀಯ ಇತಿಹಾಸ ಶಾಸ್ತ್ರಜ್ಞರಿಂದ ಪ್ರಾರಂಭವಾಯಿತು. ಇವರುಗಳಲ್ಲಿ ಪಾಶ್ಚಾತ್ಯ-ಮತ್ತು ಭಾರತೀಯ ಸಂಶೋಧಕರಿಂದ ಸಂಶೋಧನೆಗಳನ್ನು ಅಂದಿನ ಹಲವಾರು ದೃಶ್ಯಕಲಾ ಸಂಸ್ಕೃತಿಗಳ ಕುರಿತಾಗಿ ಅನಾವರಣ




ಗೊಳಿಸಿದ್ದಾರೆ. ಇಂದಿನ ಸಮಕಾಲೀನ ಸನ್ನಿವೇಶದಲ್ಲಿ ಹೊಸ ಆಯಾಮದೊಂದಿಗೆ ಮುನ್ನಡೆಯುತ್ತಿವೆ.




ಲುಡ್ವಿಂಗ್ ಬಕಾಫರ್ ಭಾರತೀಯ ಆರಂಭಿಕ ಶಿಲ್ಪಕಲೆಯ ಕುರಿತು ಬೆಳಕು ಚೆಲ್ಲಿದರು

## ಸಂಶೋಧನೆಗಳಲ್ಲಿನ ಹೊಸ ಹೆಜ್ಜೆಗಳು

ಕಲಾ ಇತಿಹಾಸ ಒಂದು ಶೈಕ್ಷಣಿಕ ಅಧ್ಯಯನವಾಗಿ ಪ್ರಾರಂಭವಾಗಿದ್ದು ನಂತರದ ಘಟ್ಟದಲ್ಲಿ ಯಾದರೂ ಕಲೆಯನ್ನು ಕುರಿತಾಗಿ-ಕಲಾವಿದರ ಕುರಿತಾಗಿ ಚಿಂತನೆಗಳು ಆರಂಭದಲ್ಲಿಯೇ ಮೊಳಕೆಯೊಡೆದಿವೆ. ಕಲಾವಿದರ ಕುರಿತಾದ ಮಾಹಿತಿಯು-ಭಾರತ ಹಾಗೂ ಐರೋಪ್ಯರಲ್ಲಿ






ಕ್ರಿಸ್ತಪೂರ್ವದಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಪ್ರಾಚೀನ ಶಾಸನಗಳನ್ನು ಕೆತ್ತುತ್ತಿದ್ದ ಶಾಸನ ಕಲಾವಿದರ ಉಲ್ಲೇಖವು ಮೌರ್ಯರ ಕಾಲದಿಂದಲೆ ದೊರೆಯುತ್ತದೆ. ಚಪಡ ಎಂಬ ಕಲಾವಿದ ಶಾಸನವನ್ನು ಕೆತ್ತಿದ್ದ.



•***Niharranjan Ray***
•*Brahmanical Gods of Burma* (1932)
•*Sanskrit Buddhism in Burma* (1936)
•*Rabindra Sahityer Bhumika* (An introduction to the works of Rabindranath Tagore) (1940)
•*Theravada Buddhism in Burma* (1946)
•*An Introduction to the Study of Theravada Buddhism in Burma* (1946)
•*Maurya and Śuṅga Art (1947) (a revised and enlarged edition of the work was published in 1976 as* Maurya and Post-Maurya Art*)*
•*Art in Burma* (1954)
•*An Artist in Life; A Commentary on the Life and Works of Rabindranath Tagore* (1967)
•*Nationalism in India* (1972)
•*Idea and Image in Indian Art* (1973)
•*An Approach to Indian Art* (1974)
•*Mughal Court Painting: A Study in Social and Formal Analysis* (1974)
•*The Sikh Gurus and the Sikh Society* (1975)
•*Eastern Indian Bronzes* (1986)







**Prof.Ratan Parimoo**

- *Paintings of the Three Tagores* (1973)
•*Studies in Modern Indian Art* (1975)
•*Life of Buddha in Indian Sculpture* (1982)
•*Sculptures of Sheshashayi Vishnu* (1983)
•*The Paintings of* Rabindranath Tagore (1989)
•*The Pictorial World of* Gaganendranath Tagore (1995)
•*Studies in Indian Sculpture* (1999)
•*Ceaseless Creativity, Paintings, Prints and Drawings.* Edited by Gauri Parimoo Krishnan, 1999. ISBN 981-04-1233-9





ಬನವಾಸಿಯಲ್ಲಿನ ನಾಗರ ಶಿಲ್ಪವೊಂದರ ಮೇಲೆ ಕಂಡರಿಸಿದ ಶಾಸನದಲ್ಲಿ ನಟಕ–ಮತ್ತು ಅವನ ಗುರು ದಮೋರಕ ಎಂಬ ಶಿಲ್ಪಕಲಾವಿದರ ಹೆಸರು ದೊರೆಯುತ್ತದೆ. ಅದೇ ರೀತಿ ಬನವಾಸಿಯಲ್ಲಿಯೇ ರವಿ ಮತ್ತು ಗೋಸಲ ಎಂಬ ಕಲಾವಿದರ ಉಲ್ಲೇಖಗಳು ದೊರೆತಿವೆ.



ಕೆ. ಜಿ. ಸುಬ್ರಹ್ಮಣ್ಯನ್, ಪ್ರಾಧ್ಯಾಪಕರು, ಕಲಾವಿದರು–ಕಲಾಸಾಹಿತಿಗಳು ಕಲೆಯ–ಕಲಾವಿದನ–ಮತ್ತು ಭಾರತೀಯ ಕಲೆಯ ಬಗ್ಗೆ ಅನನ್ಯವಾದ ಬರವಣಿಗೆ ಮಾಡಿದ್ದಾರೆ

ನಂತರದ ಕಾಲಘಟ್ಟದಲ್ಲಿ ಕಲಾ ಸಂಪ್ರದಾಯವನ್ನು–ಶೈಲಿಯನ್ನು ಹುಟ್ಟುಹಾಕಿದ ಕಲಾವಿದರ ಕುರಿತಾದ ಮಾಹಿತಿಗಳು ಬಹುವಾಗಿ ಉಪಲಬ್ಧವಾಗಿವೆ. ಕಲಾವಿದರ–ಕಲಾಸೃಷ್ಟಿಗಳು ಅಂದಿನ





ಪ್ರೊ.ಎಸ್.ಶೆಟ್ಟರ್- ಕರ್ನಾಟಕದಲ್ಲಿ 80 ರ ದಶಕದಲ್ಲಿಯೇ ಭಾರತೀಯ ಕಲಾ ಇತಿಹಾಸ ಸಂಸ್ಥೆಯನ್ನು ಹುಟ್ಟುಹಾಕಿ ಅದರಮೂಲಕವಾಗಿ ಹಲವಾರು ದಾಖಲೆಯ ಕೆಲಸ ಮಾಡಿದ್ದಾರೆ.













ಧಾರ್ಮಿಕತೆಗೆ ಪೂರಕವಾಗಿ ನಡೆದರೂ-ಸಾಮಾಜಿಕ ಮತ್ತು ಸಾಂಸ್ಕೃತಿಕ ಸನ್ನಿವೇಶದಲ್ಲಿಯೇ ಅಡಕವಾಗಿವೆ. ಕಾಲಾನುಕ್ರಮಣಿಕೆಯಲ್ಲಿ ಕಲಾವಿದರ ಮತ್ತು ಕಲಾಸೃಷ್ಟಿಯ ಕುರಿತಾದ ಅಧ್ಯಯನವು-ಸಂಶೋಧನೆಯು ಭಾರತೀಯ ಪಾರಂಪರಿಕ ಕಲೆಯಲ್ಲಿ ಹಲವಾರು ಪ್ರಶ್ನೆಗಳಿಗೆ ಉತ್ತರ ನೀಡಬಲ್ಲದು. ಕಲಾವಿದರ-ಕಲಾ ಚಟುವಟಿಕೆಗಳು ರಾಜಾಶ್ರಯದಲ್ಲಿ-ಜನಾಶ್ರಯದಲ್ಲಿ-



ಪ್ರೊ. ಗುಲಾಮ್ ಮಹ್ಮದ್ ಶೇಖ್
ಕಲಾವಿದರಾಗಿ, ಕಲಾ ಇತಿಹಾಸಕಾರರಾಗಿ- ಮಾಡಿದ ಸಾಧನೆ ಅಪೂರ್ವ

















ಜೀವಿತಾವಧಿಯಲ್ಲಿಯೇ ದಂತ ಕಥೆಯಾಗಿದ್ದ ರಾಜಾ ರವಿವರ್ಮನ ಕುರಿತಾದ ಪುಸ್ತಿಕೆಗಳು–ಕಲಾವಿದನ ಕಲಾಕೃತಿಗಳ ಮತ್ತು ಕಲಾಜೀವನವನ್ನು ಅನಾವರಣ ಮಾಡುತ್ತವೆ

ಧಾರ್ಮಿಕ ಸಂಘಟನೆಗಳ ಆಶ್ರಯದಲ್ಲಿ ನಡೆದುಕೊಂಡುಬಂದಿವೆ. ಕಲೆ–ದೃಶ್ಯಕಲೆ–ನಿರಂತರ–ಕ್ರಿಯಾತ್ಮಕತೆಯ ಭಾಗವಾಗಿದೆ. ಕಲಾಸೃಷ್ಟಿ–ಅದರ ಅವಿಭಾಜ್ಯ ಅಂಗವಾಗಿ ಅಭಿವೃದ್ಧಿಯಾಗಿದೆ.






ಸಾಮಾಜಿಕ–ಸಾಂಸ್ಕೃತಿಕ ಇತಿಹಾಸ ಕಲಾಇತಿಹಾಸದ ಅಧ್ಯಯನದ ಅವಿಭಾಜ್ಯ ಅಂಗವಾಗಿದೆ











ಪ್ರಾಚೀನ ಕಲಾ ಇತಿಹಾಸದ ಹಾಗು ದೃಶ್ಯ ಸೃಷ್ಟಿಯ ಆಂತರ್ಯವನ್ನು ಸಂಶೋಧಿಸುವುದೇ ಅತಿ ದೊಡ್ಡ ಕೆಲಸ. ಅದೇ ರೀತಿಯಲ್ಲಿ ಬ್ರಿಟೀಷ್ ವಸಾಹತೋತ್ತರ ಕಾಲದ ನಂತರದ ಭಾರತದ ದೃಶ್ಯಕಲೆಯಲ್ಲಿನ ಬೆಳವಣಿಗೆಯನ್ನು ಸಂಪೂರ್ಣವಾಗಿ ಅಧ್ಯಯನಕ್ಕೆ ಒಳಪಡಿಸಿಲ್ಲ. ಅದರ ಅಧ್ಯಯನ-ಸಂಶೋಧನೆಯ ಅವಶ್ಯಕತೆಯು ಭಾರತದ ದೃಶ್ಯಕಲಾ ಇತಿಹಾಸವನ್ನು ಪುನರ್ ರಚಿಸುವಲ್ಲಿ ಸಹಾಯಕವಾಗುತ್ತದೆ.



* ಕಲಾ ಇತಿಹಾಸವು ದೃಶ್ಯಕಲೆಯ ಸಂಶೋಧನೆಯಲ್ಲಿ ವಹಿಸಿದ ಪಾತ್ರ.
* ಕಲಾ ಇತಿಹಾಸವು ಭಾರತದಲ್ಲಿ ಕಂಡುಕೊಂಡ ಆಯಾಮ.
* ಪಾಶ್ಚಾತ್ಯ ದೃಷ್ಟಿಕೋನ-ಹೆನ್ರಿಚ್ ವೋಲ್ಫಿನ್, ಪೆನೋಸ್ಕಿ ಇತ್ಯಾದಿ
* ಭಾರತದಲ್ಲಿ ಅದರ ಪ್ರಭಾವ-
* ಲುಡ್ವಿಂಗ್ ಬಕಾಫರ್, ಸ್ಟೆಲ್ಲಾ ಕ್ರಾಮ್ರಿಶ್ಚ್, ಪರ್ಸಿ ಬ್ರೌನ್, ಜೆ.ಸಿ.ಹಾರ್ಲೆ, ಜೋನ್ನಾ ವಿಲಿಯಮ್, ಮೈಕಲ್ ಮೈಸ್ಟರ್ , ವಾಲ್ಟರ್ ಸ್ಪಿಂಕ್ ಇತ್ಯಾದಿ,
* ಹೆಚ್ಚಿನವರು ಪ್ರಾಚೀನ ಕಲೆಯ ಬಗ್ಗೆಯೇ ಸಾಕಷ್ಟು ಅಧ್ಯಯನ ಮಾಡಿದ್ದಾರೆ.





* ಈ ಹಿನ್ನೆಲೆಯಲ್ಲಿ ಭಾರತೀಯ ವಿದ್ವಾಂಸರಲ್ಲಿ ಭಾರತೀಯ ದೃಷ್ಟಿಕೋನವನ್ನು ಬಿತ್ತಿದ ಕೀರ್ತಿಯು ಡಾ.ಆನಂದ ಕುಮಾರಸ್ವಾಮಿ, ಮುಲ್ಕರಾಜ ಆನಂದ, ನಿಹರ ರಂಜನ್ ರೇ, ಎಸ್.ಕೆ.ಸರಸ್ವತಿ, ಸಿ.ಸಿವರಾಮಮೂರ್ತಿ, ಕಾರ್ಲ ಖಂಡೇಲವಾಲ, ಜಯಾ ಅಪ್ಪಸ್ವಾಮಿ, ಎಸ್.ಎ.ಕೃಷ್ಣನ್ ಮೊದಲಾದವರಿಗೆ ಸಲ್ಲುತ್ತದೆ.
* ಸಂಶೋಧನಾ ಮಾರ್ಗದಲ್ಲಿ ಕಲಾ ಇತಿಹಾಸವು ಯಾವುದೇ ದೃಶ್ಯಕಲಾ ಸಂಪ್ರದಾಯದ ಸಂಶೋಧನೆ ಇರಲಿ-ಅದರ ಬೆನ್ನಲುಬಾಗಿದೆ. ಪ್ರಾಚೀನ-ಅರ್ವಾಚೀನ ಎಂಬ ಬೇಧ- ಭಾವ ವಿಲ್ಲದೆ ಸಂಶೋಧನಾ ಮಾರ್ಗ ಸೂತ್ರಗಳನ್ನು ಹೇಳಿಕೊಡುವ ಜವಾಬ್ದಾರಿ ಕಲಾಇತಿಹಾಸದ್ದೇ ಆಗಿದೆ.
* ಕಲೆಯ ಇತಿಹಾಸೀಕರಣ-ಕಲಾಕೃತಿಯು ತನ್ನ ಅವಧಿಯಲ್ಲಿಯೇ ಐತಿಹಾಸಿಕ ದಾಖಲೆ ಯಾಗುತ್ತದೆ. ಅದರ ಐತಿಹಾಸಿಕ ಮಹತ್ವವನ್ನು ಅರ್ಥೈಸುವ ಜವಾಬ್ದಾರಿ ಕಲಾ ಇತಿಹಾಸದ ಮೇಲಿದೆ.

ದೃಶ್ಯಕಲೆಯ ಸಂಶೋಧನೆಗೆ ಹೊಸ ಆಯಾಮ ದೊರೆತಿದ್ದು ಕಳೆದ ಶತಮಾನದಿಂದಲೆ ಎನ್ನಬಹುದು. ಭಾರತದ ಸ್ವಾತಂತ್ರ್ಯಪೂರ್ವದಲ್ಲಿಯೇ ಅಂದಿನ ಆಧುನಿಕ ಕಲೆಯ ಕುರಿತಾಗಿ ಆಸಕ್ತಿ ಹಾಗೂ ಲೇಖನ ಪ್ರಕಟಣೆಗಳು ಪ್ರಾರಂಭವಾದವು. ಹಾಗೆಯೇ ಅದಕ್ಕಿಂತಲೂ ಅರ್ಧ ಶತಮಾನ ಮೊದಲಿಗೆ ಭಾರತೀಯ ಪ್ರಾಚೀನ ಕಲಾ ಪ್ರಕಾರಗಳ ಕುರಿತಾದ ವಿದ್ವತ್ಪೂರ್ಣವಾದ ಸಂಶೋಧನೆಗಳು ಮೊದಲುಗೊಂಡವು. ಭಾರತೀಯ ಕಲಾ ಇತಿಹಾಸ ಹಾಗೆ ನೋಡಿದರೆ ವ್ಯವಸ್ಥಿತವಾಗಿ ಬೆಳವಣಿಗೆಯಾಗಿದ್ದು 1950ರ ದಶಕದಿಂದ. ಅದಕ್ಕೂ ಮೊದಲು ಬಂದಂತಹ ಕಲಾ ಇತಿಹಾಸ ಸಾಹಿತ್ಯವು ಐರೋಪ್ಯ ವಿದ್ವಾಂಸರ ಪ್ರಭಾವಿತವಾಗಿರುವಂತಹದು ಎಂದು ಸ್ಥೂಲವಾಗಿ ಹೇಳಬಹುದು.

❑

# New Dimensions of Art and Education; Challenges and Perspectives

♦ Dr. Unni Krishna K

"The highest education is that which does not merely give us information but makes our life in harmony with all existence." Rabindranath Tagore.

**Abstract**

Art education in post – independent India has proven to be as challenging as any other field of education. Globalization and privatization have permeated the field of art and education as will. Art education as a diverse discipline, which talks about exhaustive Indian art forms, still remains an unexplored domain. Contemporary India is experimenting with new ideas of art in education – several institutions have been contributing towards art education for decades but have been constantly struggling to adopt to the demands of industrial evolution.

*There's need to rethink art education, especially in the context of its new evolving dimensions-the central government of India drafting a new education policy. The need of the hour is to formulate a solution with a holistic, scientific and creative perspective preferably by a government body so it can involve artists, activists and intellectuals together. Government alone cannot bring in a larger change in society. It will take a serious movement by artists to make a conscious change, not just on surface level, not just in the metropolitan society and not just for media attention. Let's not forget the idea of Gandhiji of reaching out to our rural India, the real India, let's not forget the idea of Tagore to reform the society through education, not just at an institutional level but at both local and global level.*

This article aims to look into the complexities of art education and discuss why holistic art education is important to the society in today's contemporary global context.

Our dialoge is based on the contemporary context of education will look into the following foundational questions on the paradox, challenges and perspectives;

1. Is there a serious issue of art illiteracy in society?
2. How do we define art education and art literacy?

The above questions will further lead us to think about art education, aim and structure. Here are a few areas to ponder over. What are the challenges of art education in today's context? Does art come with a set of policies, ethics and guidelines? Do we have a huge gap in education and industry sector? What is the need for art education in schools today? Is there sufficient awareness on art education in society, the art literacy?

**With Shantiniketan model of Tagore's art education, India could inspire and develop on the structure of Art Institutions across the nation.** Art movement in India played a vital role in representing India on the global and local context. The institution as well as the art movement largely focused on creating awareness on the value of art and its practice to the society. It recommended that art be taught from the primary school levels by senior artist, art historians, scholars and

educationists. Few educational institutes have made an attempt at a comprehensive approach to discipline-based art education, by including art production, criticism, history and aesthetics in their teaching.

The field art education has recently been influenced by museum education, art in general education (artists in residence) and the resurgence of interdisciplinary education. National, state and local art associations, councils and foundations, and state departments of education are all currently trying to clarify the mission and priorities of art education.

The fundamental questions that need to be addressed are:

1. Is there a serious lacking on art illiteracy in society?
2. How do we define art education and art literacy?

We need to reach a common agreement on what students should learn about art. Several countries have experimented on the situation, one such being the case of United States. Ronald J Topping argues in his essay "Art education: A Crisis in Priorities" that in the process of preparing the art curriculum featuring art production, art history, aesthetics, art criticism and knowledge regarding civilization, creative self-expression has been denigrated for the sake of promoting the intellectual aspects of art education. It is also evident that in the process of emphasizing the intellectual aspects, the creative self-expression aspect of art is being compromised on. Topping also debates on "what should be taught in art education, who should teach art and how should it be assessed". Noted educationalist Sir Ken Robinson argues about "do schools kill creativity and how to escape education's Death Valley", analyzing the failure of education system across the world in promoting and inspiring creativity. While Noam Chomsky argues that "education is ignorance", We need to understand that it is in this global context of education and its crisis that we are looking at the status of art education in India.

## Paradox and Complexities

Lack of policies and guidelines, absence of art education from school level and lack of awareness in general is encouraging art illiteracy. The following are few of the major issues of art illiteracy in India.

**Duplication of art work** has been a longstanding crisis in the Indian art market. It's common to come across duplicate art work in every market, traded in a manner that it' s taken for granted as a culture. Isn't it disgraceful that we never question such a dilution of our art and culture? This is undoubtedly a reason for loss of Identity and the lack of respect on Art in society.

## Ethics or the lack of regulation and monitoring

Today, art education in India has several pressing issues that need to be dealt with. The changes in the industry, catering to a global scale, led the Indian market towards the online and digital space. With growing demand for a digital approach, the opportunist market took advantage. Then came in new attractive courses packaged with the promise of an attractive pay scale in reputed studios, It has never been brought to the surface that such centers have been making use of software without the approval of any university or governmental body. For example in the animation industry, batches after batches have joined in the past few years, only to be disillusioned and disappointed on realizing the current market scenario and scope of their work in India. The industry couldn't offer enough jobs for them, especially during the recession period. Many of them neither got a degree / diploma nor a job. This exploitation hasn't been pulled out from its roots only because of art illiteracy and lack of regulation.

## Industry Gap

While in the West, the university and industry work together and it's the industry that takes initiative to collaborate with the University's in-house Research and development Centres, in India it works the other way round. In India, very few industries prefer to collaborate with art institutions and even if they do, it's mostly for major projects. The widening gap of industry and education is one of the major reasons for the lack of art education and its development. This further reflects on the reputation of the art institution and the value of art in the industry as well.

## Art Education in schools

While there are several challenges in implementing art education for government primary, secondary and high schools, the private schools also find it difficult to accommodate art as a subject. This is the reason why art is often merged with craft of SUPW. Parents otherwise seem to object on the "wastage of time" in art and term it as a distraction from core studies.

This situation leads to the question of whether the field of art promises a decent career. While a few states have made art as a compulsory subject in government schools, many states in India haven't found it necessary. This question the credibility and economic situation of field of art.

## Art Education in Society

The Primary reason of art not being accepted as anything concrete beyond a hobby is the lack of art education in society, As India struggles to hike basic literacy rates, the demand for art education might seem overly ambitious. In rural India, craft and handloom communities struggle to survive despite working on such a large scale, which is again due to lack of appropriate art education, art governance and policy. The suicides of the handloom artists in India have reached alarming number. These artists don't have sufficient knowledge, awareness or support to approach an educated union to voice their pain and struggle. Like the Indian farmers, Indian artists are ignored, marginalized and forgotten.

## Art Institutions

From mere single digit Art Institution, India had realized the potential of the Art Education at a serious Graduate, Post Graduate and Doctoral studies and today there are several number of institutions. While we need to verify how many of these institutions are government / UGC approved institutions following the guidelines and regulations, we need to also look into how many of them are for the financially challenged. It's important to understand how many of these institutions have taken the responsibility to educate the society and masses.

"Academic" versus "industry" based education. Art institutions in India are either academic with research as focus or industry-centric with placement and skill development as priority. While we hardly find very few institutions trying to balance this scenario, we also notice that the larger goal of art education for society especially the rural India is highly ignored. Media and metropolitan cities have largely ignored the existence of rural India and their concerns. The testimonials and case studies of P. Sainath support the argument with sufficient evidence.

## Lack of Leadership

Several critics have been voicing concerns around the "lack of leaders" in Indian art fraternity, whether it be literature, film, art, music or poetry. There is an evident gap after stalwarts in the field of art, such as Kuvempu, Gokak, Rajkumar, K.K. Hebbar and Ananda Coomaraswamy.

The consequences are further reflected in the lack of unified action, vision and development. The unresolved issues of government versus activist; gender and identity politics; the stereotypes in society on art and culture; the endangered folk, rural and tribal art; the lack of infrastructure and trained human resources; and the disintegrated society of artists are only a few among many issues.

## Conclusion : Balance technology with tradition and urban with rural

Art and education are witnessing a dynamic change today. New demands for the fusion of art and technology are on a high rise. IT sectors have been adopting a larger number of young fine art candidates with an attractive pay scale to train and acclimatize them to the new technological requirements for user interface design, user experience design and digital art as compared to the previously sought after Animation Industry in the past two years. It's important to know that this mass recruitment is a new means of survival for artists. This can also be seen as an acquisition of art labourers (coolies) on the same lines as the cyber labours (cyber kollies) of IT revolution. Traditional industries such as film, advertisement and design are also evolving with the

demand for new digital platforms and customer-centric requirements. The era of the information to digital and from digital to post digital era is largely changing the scenario of art and education as well. Art appreciation courses in many countries are a common course of choice for engineering, medical and non-art students as well. Leading art universities have set up their research labs with IT firms and industrial units. Art being hijacked by technology is an ongoing debate yet the art activist and intellectuals are also voicing for the freedom to experiment.

The core question in Indian context is to introspect on where we are today in terms of art in global and local context? Should we adopt to the evolving global IT trends, oppose it or balance it with a primary vision? This further brings in the question of funding for artists (especially rural) who are not necessary willing to work for the industry. How many organizations do we have today that come forward to support artists? What is the scale of funding that we can get from the government? Can government alone handle these situations? Looking at the scale of suicide cased of folk artists in the past few years, it's alarming to note that after the farming industry, it's, the art / folk art industry that is suffering in terms of economy and existence.

There's need to rethink art education, especially in the context of its new evolving dimensions-the central government of India drafting a new education policy. The need of the hour is to formulate a solution with a holistic, scientific and creative perspective preferably by a government body so it can involve artists, activists and intellectuals together. Government alone cannot bring in a larger change in society. It will take a serious movement by artists to make a conscious change, not just on surface level, not just in the metropolitan society and not just for media attention. Let's not forget the idea of Gandhiji of reaching out to our rural India, the real India, let's not forget the idea of Tagore to reform the society through education, not just at an institutional level but at both local and global level. It's important to also notice that apart from large foundations, there are few artists and activists who contribute in rural art education as the light of hope for a better world of art.

Where the mind in without fear and the head is held high
Where knowledge is free

Where the world has not been broken up into fragments
By narrow domestic walls
Where words come out from the depth of truth
Where tireless striving stretches its arms towards perfection
Where the clear stream of reason has not lost its way
Into the dreary desert sand of dead habit
Where the mind is led forward by thee
Into ever-widening thought and action
Into that heaven of freedom, my Father, let my country awake
Rabindranath Tagore

**References:**

God in, Seth, Stop Stealing Dreams (what is school for?), 2012
Topping, Ronald J, Art education : A Crisis in Priorities, Art Education, Vol, 43, No. 1 PP.
20-24, National Art Education Association, Jan. 1990



# ದೃಶ್ಯಕಲಾ ಶಿಕ್ಷಣದಲ್ಲಿ ಶೃಂಗಾರ ರಸದ ಮಹತ್ವ

♦ ಡಾ: ಶ್ರೀಧರಮೂರ್ತಿ

ನಾನು ಕರ್ನಾಟಕ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ದೃಶ್ಯಕಲೆಯನ್ನು ಸುಮಾರು ಇಪ್ಪತ್ತೈದು ವರ್ಷಗಳಿಂದ ಭೋದಿಸುತ್ತಿದ್ದೇನೆ ಹಾಗೂ ಅನೇಕ ಸಂದರ್ಭಗಳಲ್ಲಿ ಕಲಾ ಶಿಕ್ಷಣದ ಅಂಗವಾಗಿ ಶೈಕ್ಷಣಿಕ ಪ್ರವಾಸವನ್ನು ಆಯೋಜಿಸುತ್ತಾ, ಭಾರತದ ಅನೇಕ ಪ್ರಾಚೀನ ದೇವಾಲಯಗಳನ್ನು ವಿದ್ಯಾರ್ಥಿಗಳೊಂದಿಗೆ ಸಂದರ್ಶಿಸಿದ್ದೇನೆ. ಸಹಜವಾಗಿ ವಿದ್ಯಾರ್ಥಿಗಳು ದೇವಾಲಯಗಳಂತಹ ಪಾರಮಾರ್ಥಿಕ ಸ್ಥಳಗಳಲ್ಲಿಯೂ ಕೂಡ ಲೌಕಿಕವಾದ ಶೃಂಗಾರ ಶಿಲ್ಪಗಳ ಉದ್ದೇಶ ಮತ್ತು ಅಗತ್ಯಗಳ ಬಗ್ಗೆ ಪ್ರಶ್ನಿಸುತ್ತಿದ್ದುದುಂಟು. ಹಲವಾರು ಸಂದರ್ಭಗಳಲ್ಲಿ ನಾನು ಕೂಡ ಕುತೂಹಲದಿಂದ ಈ ರೀತಿಯ ಶಿಲ್ಪಗಳ ಉಗಮ, ಬೆಳವಣಿಗೆ ಹಾಗೂ ಅವುಗಳ ಮಹತ್ವದ ಬಗ್ಗೆ ತಿಳಿಯಲು ಪ್ರಯತ್ನಿಸಿದ್ದೇನೆ.

ಪ್ರಸ್ತುತ ದೃಶ್ಯಕಲಾ ಶಿಕ್ಷಣದಲ್ಲಿ ಶೃಂಗಾರ ರಸದ ಮಹತ್ವ ಇಂದಿನ ಚರ್ಚೆಯ ವಿಷಯವಾಗಿದೆ. ಆದರೆ ಕಲಾಶಿಕ್ಷಣದಲ್ಲಿ ಶೃಂಗಾರ ರಸದ ಮಹತ್ವದ ಬಗ್ಗೆ ಯೋಚಿಸುವ ಮೊದಲು ಕಾಮ ಅಥವಾ ಲೈಂಗಿಕತೆ, ಅಶ್ಲೀಲ ಮತ್ತು ವಿಕೃತಿ ಶೃಂಗಾರ ಪ್ರಜ್ಞೆ ಹಾಗೂ ಒಟ್ಟಾರೆಯಾಗಿ ಶೃಂಗಾರರಸದ ಬಗ್ಗೆ ವಿವೇಚಿಸುವುದು ಬಹುಮುಖ್ಯವೆಂದು ಭಾವಿಸುತ್ತಿದ್ದೇನೆ.



ಶಿವ–ಪಾರ್ವತಿ, ಬಾದಾಮಿ

ಪ್ರಪಂಚದಲ್ಲಿ ಎಲ್ಲಾ ಕಾಲಘಟ್ಟಗಳಲ್ಲಿ ಮತ್ತು ಪ್ರದೇಶಗಳಲ್ಲಿ ರಚಿತವಾದ ಶೃಂಗಾರ ರಸದ ಕಲಾಕೃತಿಗಳನ್ನು ಅವಲೋಕಿಸುವುದು ಕೂಡ ಬಹುಮುಖ್ಯವಾಗಿದೆ. ಇದರಿಂದ ಶೃಂಗಾರ ರಸದ ವಿವಿಧ ಪ್ರಕಾರಗಳ ಸಮಗ್ರ ಪರಿಚಯ ಮತ್ತು ಶೃಂಗಾರದ ಅನೇಕ ಸಾಧ್ಯತೆಗಳು ಹೊಳೆಯುತ್ತವೆ. ಇಂದಿನ ದೃಶ್ಯ ಮಾಲಿನ್ಯದಿಂದ ತುಂಬಿ ತುಳುಕುತ್ತಿರುವ 'ಇಂಟರ್‌ನೆಟ್' ಯುಗದಲ್ಲಿ ಸಮಾಜಕ್ಕೆ ಸರಿಹೊಂದುವಂತವರು ಮತ್ತು ಸಮಾಜದ ಸ್ವಾಸ್ಥಕ್ಕೆ ಪೂರಕವಾದಂತಹ ಕಲಾಕೃತಿಗಳನ್ನು ರಚಿಸಿ ವಿಶಾಲ ಮನೋಭಾವದ ಹೊಸ ಸ್ಪಂದನೆ ನೀಡುವುದು ಅಗತ್ಯವಾಗಿದೆ.

ಲೈಂಗಿಕತೆ ಅಥವಾ ಕಾಮ, ಅಶ್ಲೀಲತೆ ಮತ್ತು ವಿಕೃತಿ ಹಾಗೂ ಶೃಂಗಾರಗಳ ವ್ಯಾಖ್ಯಾನವು ಪ್ರದೇಶದಿಂದ ಪ್ರದೇಶಕ್ಕೆ ಹಾಗೂ ಒಂದು ಸಮುದಾಯದಿಂದ ಇನ್ನೊಂದು ಸಮುದಾಯಕ್ಕೆ ವಿಭಿನ್ನವಾಗುತ್ತಾ ಹೋಗುತ್ತದೆ. ಉದಾಹರಣೆಗೆ ಭಾರತದ ಬಹುತೇಕ ಭಾಗಗಳಲ್ಲಿ ಪರಕೀಯ



ಶಿವ-ಪಾರ್ವತಿ, ಬಾದಾಮಿ



**ಶಿವ–ಪಾರ್ವತಿ, ಬಾದಾಮಿ**

ಆಕ್ರಮಣಗಳ ಮುಂಚೆ ಭಾರತೀಯ ನಾರಿಯರು ತೆರೆದ ಎದೆಯಲ್ಲಿಯೇ ಇರುತ್ತಿದ್ದುದುದನ್ನು ಅನೇಕ ಶಿಲ್ಪಗಳು ಮತ್ತು ಸಾಹಿತ್ಯ ಕೃತಿಗಳ ಆಧಾರಗಳಿಂದ ಗುರುತಿಸಬಹುದು. ಆದರೆ ನಂತರದಲ್ಲಿ ಅದನ್ನು ಅಶ್ಲೀಲವೆಂದು ಪರಿಗಣಿಸಿ ವಸ್ತ್ರಗಳಿಂದ ಮುಚ್ಚಿಟ್ಟುಕೊಳ್ಳುವ ಪರಿಪಾಠ ಬಂದಿತು.

ಶೃಂಗಾರ ಮತ್ತು ಅಶ್ಲೀಲತೆಯ ಮಧ್ಯೆ ಒಂದು ಸಣ್ಣಗೆರೆ ಇರುತ್ತದೆ. ಈ ರೀತಿಯ ವಿವಾದಗಳು ಇಂದಿನ ಚಲನಚಿತ್ರಗಳ ಸೆನ್ಸಾರ್ ಮಂಡಳಿಯಲ್ಲಿ ಬಹುಚರ್ಚಿತ ವಿಷಯವಾಗುತ್ತಿರುವುದನ್ನು ಗಮನಿಸಬಹುದು. ಹೀಗಾಗಿ ಶೃಂಗಾರದ ಬಗ್ಗೆ ಒಂದು ನಿಖರವಾದ ಅಭಿಪ್ರಾಯಕ್ಕೆ ಬರಲು ಕಠಿಣವಾಗುತ್ತದೆ. ಆದರೂ, ಶೃಂಗಾರವೆಂದರೆ ಸ್ತ್ರೀ ಮತ್ತು ಪುರಷರಿಬ್ಬರ ಪ್ರೇಮಪೂರ್ಣ



ಶುಕಭಾಷಿಣಿ, ಬಾದಾಮಿ



ಮಿಥುನ, ಕುಶಾನ

ಸಮಾಗಮ. ಒಂದು ಸಮುದಾಯವು ತನ್ನ ಸೀಮಿತ ಪ್ರದೇಶ ಮತ್ತು ಕಾಲದ ಚೌಕಟ್ಟಿನೊಳಗೆ ಯಾವುದೇ ಮುಜುಗರವಿಲ್ಲದೇ ಒಪ್ಪಿಕೊಂಡು ಆಚರಣೆಯಲ್ಲಿ ತೊಡಗಿಸಿಕೊಂಡಂತಹ ರಸ ಪ್ರಜ್ಞಾ ಅಥವಾ ಶೃಂಗಾರ ಪ್ರಜ್ಞೆ ಎಂದು ವ್ಯಾಖ್ಯಾನಿಸಬಹುದು.

ಪ್ರಾಣಿವರ್ಗದಲ್ಲಿ ಲೈಂಗಿಕತೆಯು ಮುಖ್ಯವಾಗಿ ಸಂತಾನೋತ್ಪತ್ತಿಗೆ ಪೂರಕವಾದ ಕ್ರಿಯೆ. ಆದರೆ ಮನುಷ್ಯನಿಗೆ ಲೈಂಗಿಕತೆ ಅಥವಾ ಕಾಮವು ದೈಹಿಕ ಮತ್ತು ಮಾನಸಿಕ ಅಗತ್ಯವಾಗಿದೆ ಹಾಗೂ ಆಧ್ಯಾತ್ಮದವರೆಗೊ ಮುಂದುವರೆದು ಶೃಂಗಾರದ ರೂಪ ತಾಳಿದೆ. ಭಾರತದ ತಾಂತ್ರಿಕ ಶೈವ ಪಂಥಗಳು ಅದರಲ್ಲಿಯೂ ಮುಖ್ಯವಾಗಿ ಪಾಶಿಪತ ಮತ್ತು ಲಾಕುಳ ಸಿದ್ಧಾಂತಗಳು ಲೈಂಗಿಕತೆಯನ್ನು ವೈಭವೀಕಾಂತಿ ಪ್ರಕೃತಿ ಪುರುಷರ ಅಥವಾ ದೇವದೇವತೆಗಳ ಸಮಾಗಮದಂತೆ



ಅಭಿಸಾರಿಕಾ, ಬೆಕಣಿ ಚಿತ್ರ

ದೈವೀಕೃತಗೊಳಿಸಿವೆ. ಇದೊಂದು ತಾತ್ವಿಕ ಮತ್ತು ಪ್ರಮುಖ ಕಾರಣವಾಗ್ದಿರೂ ಕೂಡ ಅನೇಕ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕಾರಣಗಳು ಸಂಕೀರ್ಣವಾಗಿ ಬೆಸೆದುಕೊಂಡು ಶೃಂಗಾರದ ಒಟ್ಟು ಕಲ್ಪನೆಯನ್ನು ನೀಡುತ್ತವೆ.

ಭಾರತದ ದೃಶ್ಯಕಲೆಯಲ್ಲಿ ಶೃಂಗಾರ ರಸದ ಕಲ್ಪನೆಗಳನ್ನು ಮಿಥುನ, ಮೈಥುನ ಹಾಗೂ ಅತಿ ಮೈಥುನಗಳೆಂದು ವರ್ಗೀಕರಿಸಬಹುದು. ಮಿಥುನ ಎಂದರೆ ಶೃಂಗಾರದ ಭಾವದ ಆಲಿಂಗನದಲ್ಲಿರುವ ಸ್ತ್ರೀ ಮತ್ತು ಪುರುಷರು. ಮೈಥುನ ಎಂದರೆ ಅವರಿಬ್ಬರು ಮುಂದುವರೆದು ಲೈಂಗಿಕ ಕ್ರಿಯೆಯ ಸಂಭೋಗಾಸನಗಳಲ್ಲಿ ಇರುವಂತಹದ್ದು. ಅತೀ ಮೈಥುನವು ವಿವಿಧ ರೀತಿಯ ವಿಕೃತ ಕಾಮಕೇಳಿಗಳನ್ನು ಒಳಗೊಂಡಿದೆ. ಈ ಎಲ್ಲಾ ವರ್ಗದ ಶಿಲ್ಪಗಳು ಮತ್ತು ಚಿತ್ರಗಳನ್ನು ನಾವು ಭಾರತದುದ್ದಕ್ಕೂ ಅನೇಕ ಪ್ರಾಚೀನ ದೇವಾಲಯಗಳಲ್ಲಿ ಕಾಣಬಹುದು.



ಅಭಿಸಾರಿಕಾ, ಬೆಕಣಿ ಚಿತ

ಶೃಂಗಾರದ ಪರಿಕಲ್ಪನೆ ಮತ್ತು ಬೆಳವಣಿಗೆಯನ್ನು ವೈದಿಕ ಕಾಲದಿಂದಲೇ ಗುರತಿಸಬಹುದು; ವೇದ ಮತ್ತು ಪುರಾಣಗಳಲ್ಲಿಯೂ ಇವುಗಳ ಉಲ್ಲೇಖಗಳಿವೆ. ಶೃಂಗಾರ ಕಲ್ಪನೆಗೆ ಪೂರಕವಾದ ಅನೇಕ ಪ್ರಾಚೀನ ಸಾಹಿತ್ಯ ಕೃತಿಗಳು ಕಂಡುಬರುತ್ತವೆ. ಕಾಳಿದಾಸನ 'ಕುಮಾರ ಸಂಭವ,'



ರೋಮನ್, ದಂಪತಿ

'ಅಭಿಜ್ಞಾತ ಶಾಕುಂತಲ', 'ಮೊಳವಿಕಾಗ್ನಿಮಿತ್ರ' ಮುಂತಾದ ಕೃತಿಗಳಲ್ಲಿ ಶೃಂಗಾರ ರಸದ ಬಹುವಿಧವಾದ ವರ್ಣನೆಗಳಿವೆ. ಹಾಗೆಯೇ ಭರತನ 'ನಾಟ್ಯಶಾಸ್ತ್ರ' ಶೂದ್ರಕನ 'ಮೃಚ್ಛಕಟಕ',



ಚುಂಬನ–ಬ್ರಾಂಕುನೆ



ಪ್ರಾರಂಭದ ರೋಮನ್, ದಂಪತಿ (ಶವಪೆಟ್ಟಿಗೆ)



ಚುಂಬನ–ಬ್ರಾಂಕುಸಿ

ಭಾಸನ 'ಸ್ವಪ್ನ ವಾಸವದತ್ತ' ಮುಂತಾದ ಸಾಹಿತ್ಯ ಕೃತಿಗಳು ಶೃಂಗಾರ ರಸದ ಭಾವವನ್ನು ಉದಾತ್ತಗೊಳಿಸಿವೆ. ಈ ಸಾಹಿತ್ಯ ಕೃತಿಗಳ ಜೊತೆಗೆ ವಾತ್ಸಾಯನನ 'ಕಾಮಸೂತ್ರ', ಕೋಕನ 'ಕೋಕಶಾಸ್ತ್ರ' ಮುಂತಾದ ಶೃಂಗಾರಕ್ಕೆ ಪ್ರಾಮುಖ್ಯತೆ ನೀಡಿದ ಸಾಹಿತ್ಯ ಕೃತಿಗಳು ಭಾರತೀಯ ದೃಶ್ಯಕಲೆಯ ಮೇಲೆ ಮಹತ್ತರವಾದ ಪರಿಣಾಮವನ್ನು ಬೀರಿವೆ.

ಪ್ರಾಚೀನ ಭಾರತದಲ್ಲಿ ಶೃಂಗಾರದ ಕಲ್ಪನೆಯನ್ನು ನೀಡುವ ದೃಶ್ಯಕಲಾ ಕೃತಿಗಳು ಹೇರಳವಾಗಿ ಮೂಡಿ ಬಂದಿವೆ. ಅವುಗಳಲ್ಲಿ ಮಿಥುನಗಳು ಅಥವಾ ಅಪ್ಸರಾ, ದೇವಂಗನಾ, ಮದನಿಕ ಎಂದೆಲ್ಲ ಕರೆಯಲ್ಪಡುವ ಕಲಾಕೃತಿಗಳು. ಮಿಥುನಗಳು ಎಂದರೆ ಮೇಲೆ ವಿವರಿಸಿದಂತೆ ಶೃಂಗಾರ ಭಂಗಿಯಲ್ಲಿರುವ ದೃಶ್ಯಕಲಾಕೃತಿಗಳು. ಮದನಿಕ, ಅಪ್ಸರಾ, ದೇವಾಂಗನಾ ಎಂದರೆ ಶೃಂಗಾರ ರೂಪಿಣಿಯಾದ ಸ್ತ್ರೀಯ ಕೃತಿಗಳು. ಈ ಸಂದರ್ಭದಲ್ಲಿ ಪ್ರಸಿದ್ಧವಾದ ಬೇಲೂರಿನ ಶಿಲಾಬಾಲಿಕೆಯರು ಅಥವಾ ಮದನಿಕೆಯರನ್ನು ನೆನೆಯಬಹುದು.

ಕಾಲಾನುಕಾಲಕ್ಕೆ ಎಲ್ಲಾ ಕಲಾಪ್ರಕಾರಗಳು ಒಂದಕ್ಕೊಂದು ಪೂರಕವಾಗಿ ವಿಕಸನ ಹೊಂದುತ್ತವೆ. ದೃಶ್ಯಕಲೆಯ ಮೇಲೆ ಸಾಹಿತ್ಯದ ಪ್ರಭಾವ ಹೆಚ್ಚಾಗಿರುತ್ತದೆ. ಸಾಮಾನ್ಯವಾಗಿ ಪುರಾಣಗಳು ಮತ್ತು ಸಾಹಿತ್ಯ ಕೃತಿಗಳಿಂದ ಸ್ಫೂರ್ತಿಗೊಂಡು ದೃಶ್ಯಕಲೆಯೂ ತನ್ನ

ಚುಂಬನ-ಶಗಾಲ್

ಸ್ವಂತಿಕೆಯನ್ನು ಸ್ಥಾಪಿಸುತ್ತದೆ. ಹೀಗಾಗಿ ಪ್ರಸ್ತುತ ಕಲಾಶಿಕ್ಷಣದಲ್ಲಿ ದೃಶ್ಯ ಭಾಷೆಯನ್ನು ಕಲಿಯುವುದು ಅಷ್ಟೇ ಅಲ್ಲದೇ, ದೃಶ್ಯಭಾಷೆಗೆ ಪೂರಕವಾದ ವಿಷಯಗಳನ್ನು ಸಾಹಿತ್ಯ ಕೃತಿಗಳ



ದಂಪತಿ-ಶಗಾಲ್



ದಂಪತಿ-ಶಗಾಲ್

ಸತತ ಅಭ್ಯಾಸದಿಂದ ದೃಶ್ಯ ಕಲಾವಿದರು ರೂಪಿಸಿಕೊಳ್ಳಬೇಕಾಗುತ್ತದೆ. ಹಾಗೆಯೇ ಶೃಂಗಾರ ರಸದ ಅನೇಕ ವಿವರಗಳು ಮತ್ತು ಪ್ರಕಾರಗಳನ್ನು ಅರ್ಥಮಾಡಿಕೊಳ್ಳಲು ಪುರಾತನ ಮತ್ತು ಸಮಕಾಲೀನ ಸಾಹಿತ್ಯ ಕೃತಿಗಳ ಅಧ್ಯಯನ ದೃಶ್ಯ ಕಲಾ ಶಿಕ್ಷಣದಲ್ಲಿ ಬಹಳ ಮುಖ್ಯವಾದದ್ದು. ಇದರಿಂದಾಗಿ ಶೃಂಗಾರ, ಅಶ್ಲೀಲ ಅಥವಾ ವಿಕೃತಿಗಳ ಬಗ್ಗೆ ಸರಿಯಾದ ತಿಳುವಳಿಕೆ ಪಡೆಯಲು ಸಾಧ್ಯ. ಹಾಗಾದಾಗ ಮಾತ್ರ ಶೃಂಗಾರ ರಸವು ಕಲುಷಿತಗೊಳ್ಳದೇ ದೃಶ್ಯ ಮಾಧ್ಯಮಕ್ಕೆ ಪೂರಕವಾಗಿ ರಸಪ್ರಜ್ಞೆಯನ್ನು ನೀಡುತ್ತದೆ.

ದೃಶ್ಯಕಲಾ ಶಿಕ್ಷಣದಲ್ಲಿ ನಗ್ನ ರೂಪದರ್ಶಿಗಳನ್ನು ಅಂಗರಚನೆಗಳನ್ನು ತಿಳಿಯಲು ಅಭ್ಯಾಸ ಮಾಡುವುದು ಸಾಮಾನ್ಯ, ಆದರೆ ಕೇವಲ ದೈಹಿಕ ಅಂಗರಚನೆಯನ್ನು ಚಿತ್ರಿಸಿದರೆ ಅವು ಶೃಂಗಾರ ರಸವನ್ನು ಅಭಿವ್ಯಕ್ತಿಗೊಳಿಸುವುದಿಲ್ಲ. ದೈಹಿಕ ಅಂಗರಚನೆಗೆ ಮೀರಿದ ಶೃಂಗಾರಭಾವವನ್ನು ದೃಶ್ಯಮಾಧ್ಯಮದಲ್ಲಿ ತುಂಬಿದಾಗ ಮಾತ್ರ ಶೃಂಗಾರ ರಸ ಉತ್ಪತ್ತಿಯಾಗುತ್ತದೆ. ಈ ಹಂತದಲ್ಲಿ ಕಲಾಶಿಕ್ಷಕನ ಜವಾಬ್ದಾರಿಯು ಹೆಚ್ಚಾಗಿರುತ್ತದೆ. ಏಕೆಂದರೆ ಅನನುಭವಿಯಾದ ವಿದ್ಯಾರ್ಥಿ ಶೃಂಗಾರ ರಸದ ಅಭಿವ್ಯಕ್ತಿಗೆ ಬದಲಾಗಿ ಅಶ್ಲೀಲವಾಗಿ ಕೃತಿ ರಚಿಸುವ ಸಾಧ್ಯತೆ ಬಹಳಷ್ಟಿರುತ್ತದೆ. ಈ ನಿಟ್ಟಿನಲ್ಲಿ

ದೃಶ್ಯಕಲಾ ಶಿಕ್ಷಣದಲ್ಲಿ ನಾವು ಭಾರತೀಯ ಶೃಂಗಾರ ರಸದ ದೃಶ್ಯಪರಂಪರೆಯ ಶಿಲ್ಪಗಳು, ಭಿತ್ತಿಚಿತ್ರಗಳು ಮತ್ತು ಬೆಕಣಿ ಚಿತ್ರಗಳನ್ನು ಸೂಕ್ಷ್ಮವಾಗಿ ಅಭ್ಯಸಿಸುವುದು ಅಗತ್ಯವಾಗಿದೆ. ಉದಾಹರಣೆಗೆ ಶೃಂಗಾರ ರಸದಲ್ಲಿ ವಿರಹವು ಕೂಡ ಒಂದು ಪ್ರಮುಖ ಪ್ರಕಾರವಾಗಿದೆ. ರಾಗಮಾಲಾ ಬೆಕಣಿ ಚಿತ್ರ ಒಂದರಲ್ಲಿ ವಿರಹಿಯಾದ ರಾಗಿಣಿ ಅಥವಾ ಸ್ತ್ರೀ ತನ್ನ ಪ್ರಿಯಕರನಿಗಾಗಿ ಕಾಯುತ್ತಿದ್ದಾಳೆ. ಹಾಗೆಯೇ ಆಕೆಯೊಡನಿರುವ ಜಿಂಕೆಯೂ ಕೂಡ ತನ್ನ ಪ್ರಿಯಕರನಿಗೆ ಕಾಯುತ್ತಿದೆಯೋ ಎಂಬಂತೆ ಆಕೆಯೂ ಅದನ್ನು ಸಂತೈಸುತ್ತಿರುವಂತೆ ಚಿತ್ರಿಸಲಾಗಿದೆ. ಹೀಗೆ ಶೃಂಗಾರದ ಭಾವವನ್ನು ಪ್ರಕೃತಿಯ ಭಾಗವಾಗಿ ಮತ್ತು ಪ್ರಕೃತಿಯ ಹಿನ್ನೆಲೆಯಾಗಿ ಚಿತ್ರಿಸಿದಾಗ ಅದರ ಅಥವಾ ಕಲಾಕೃತಿಯ ವ್ಯಾಪ್ತಿಯು ವಿಸ್ತಾರಗೊಳ್ಳುತ್ತದೆ.



ಚುಂಬನ–ಕ್ಲಿಮ್ಟ್



ಮರದಚ್ಚು -ಜಪಾನ್

ಆದಿ ಮಾನವನಿಂದ ಇಂದಿನವರೆಗೂ ಶೃಂಗಾರದಭಾವವನ್ನು ಮತ್ತು ಆಚರಣೆಗಳನ್ನು ಬಿಂಬಿಸುವ ಕಲಾಕೃತಿಗಳು ಪ್ರಪಂಚದ ಎಲ್ಲಾ ಭಾಗಗಳಲ್ಲಿ ಕಂಡು ಬರುತ್ತವೆ. ಗ್ರೀಕ್, ರೋಮನ್ ರೆನೆಸಾನ್ಸ್ ಮುಂತಾದ ಕಾಲಘಟ್ಟಗಳಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿಯೂ ಕೂಡ ಕಲಾವಿದರು



ಮರದಚ್ಚು-ಜಪಾನ್

ಶೃಂಗಾರವನ್ನು ವಿವಿಧ ರೀತಿಯಲ್ಲಿ ಅಭಿವ್ಯಕ್ತಿಗೊಳಿಸಿರುವುದನ್ನು ಕಾಣಬಹುದು. ಅಲ್ಲದೇ ಮುಂದಿನ ಕಾಲಾಂತರಗಳಲ್ಲಿ ಅನೇಕ ಆಧುನಿಕ ಮತ್ತು ಸಮಕಾಲೀನ ಪಾಶ್ಚಾತ್ಯ ಕಲಾವಿದರು ಶೃಂಗಾರ ರಸವನ್ನು ಶ್ರೀಮಂತಗೊಳಿಸಿದ್ದಾರೆ.

ಪ್ರಪಂಚದಲ್ಲಿ ಎಲ್ಲಾ ಕಾಲಘಟ್ಟಗಳಲ್ಲಿ ಮತ್ತು ಪ್ರದೇಶಗಳಲ್ಲಿ ರಚಿತವಾದ ಶೃಂಗಾರ ರಸದ ಕಲಾಕೃತಿಗಳನ್ನು ಅವಲೋಕಿಸುವುದು ಕೂಡ ಬಹುಮುಖ್ಯವಾಗಿದೆ. ಇದರಿಂದ ಶೃಂಗಾರ ರಸದ ವಿವಿಧ ಪ್ರಕಾರಗಳ ಸಮಗ್ರ ಪರಿಚಯ ಮತ್ತು ಶೃಂಗಾರದ ಅನೇಕ ಸಾಧ್ಯತೆಗಳು ಹೊಳೆಯುತ್ತವೆ. ಇಂದಿನ ದೃಶ್ಯ ಮಾಲಿನ್ಯದಿಂದ ತುಂಬಿ ತುಳುಕುತ್ತಿರುವ 'ಇಂಟರ್‌ನೆಟ್' ಯುಗದಲ್ಲಿ ಸಮಾಜಕ್ಕೆ ಸರಿಹೊಂದುವಂತವರು ಮತ್ತು ಸಮಾಜದ ಸ್ವಾಸ್ಥಕ್ಕೆ ಪೂರಕವಾದಂತಹ ಕಲಾಕೃತಿಗಳನ್ನು ರಚಿಸಿ ವಿಶಾಲ ಮನೋಭಾವದ ಹೊಸ ಸ್ಪಂದನೆ ನೀಡುವುದು ಅಗತ್ಯವಾಗಿದೆ. ಹಾಗಾದಾಗ ಮಾತ್ರ ನವರಸಗಳಲ್ಲೊಂದಾದ ಶೃಂಗಾರ ರಸದ ಮಹತ್ವವು ದೃಶ್ಯಕಲೆ ಮತ್ತು ಕಲಾ ಶಿಕ್ಷಣದಲ್ಲಿ ಸೃಜನಾತ್ಮಕ ಆವಿಷ್ಕಾರಗಳಿಗೆ ದೃಶ್ಯರೂಪಕಗಳಾಗುತ್ತವೆ.

❑

# Indian Art Education and Contemporary Art Practices

♦ Dr. Gomathi

Arts education in India is a distinct academic discipline with choices for specialized training in arts run by governmental and private institutions. Ancient Indian educational systems were based on religious models such as the Hindu Ashram, Muslim madrasas, Christian paro chial schools, Buddhist monastery, and large state-sponsored public universities and libraries until the British instituted schools following their system of preparatory schools under the Cambridge system to promote service to the British Empire.

This brought several changes to Indian notions of literacy and education and to the very culture of

learning including, in the context of the arts, the ideas of differences and hierarchies between art and craft, the social relationship between master crafts person and artisan, public art and individual art, religious art and secular art.

Art in India as across the world has undergone a myriad change that has culminated into what we visualise today, a unique amalgam of sensibilities from the west as well as from across Asia. In the 21st century a new phase in the history of awareness in India has opened up.

The cultural diversity of the country adds to the multi dimensional approach which is a direct approach and a direct contribution of various religious beliefs, languages and the still prevalent rural culture mixing with the rapidly growing urban culture. The diversity of the country like its art is an experience in itself and cannot be understood by a bystander. Such is the nature and crux of the new modern India and its newly emerging art.

The paper will discuss about the contemporary art practices in India with reference to its practising artists.

**Key Words:** Education, Contemporary Art, Contemporary Art Practices, Artistsexperimenting with new ideas of art in education – several institutions have been contributing towards art education for decades but have been constantly struggling to adopt to the demands of industrial evolution.

❑

# ದೃಶ್ಯಕಲೆಯ ಸಂಶೋಧನಾತ್ಮಕ ನೆಲೆಗಳು

♦ ಪ್ರೊ. ಎಸ್. ಸಿ. ಪಾಟೀಲ

ದೃಶ್ಯಕಲಾ ಕ್ಷೇತ್ರದಲ್ಲಿ ಸಂಶೋಧನಾ ಪರಂಪರೆಯ ಇತಿಹಾಸ ವನ್ನು ಗಮನಿಸಿದರೆ ವಿದೇಶದಲ್ಲಿ ಸಂಶೋಧನೆ, ಸಂಶೋಧನಾ ಧ್ಯಯನ ಮೊದಲು ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಭಾರತದಲ್ಲಿ ಬರೋಡಾ, ದೆಹಲಿ, ವಾರಣಾಶಿ, ಶಾಂತಿನಿಕೇತನ ಮುಂತಾದ ಕಡೆಗಳಲ್ಲಿ ಸ್ವಲ್ಪಮಟ್ಟಿನ ಸಂಶೋಧನಾ ಅಧ್ಯಯನಗಳು ವಿಶ್ವವಿದ್ಯಾಲಯದ ಮಟ್ಟದಲ್ಲಿ ಪ್ರಾರಂಭಗೊಂಡಿರುವುದು ಕಂಡು ಬಂದರೂ, ಇನ್ನುಳಿದ ಕ್ಷೇತ್ರಗಳಲ್ಲಿ ಆದಷ್ಟು ದೊಡ್ಡ ಪ್ರಮಾಣದಲ್ಲಿ ಈ ಕ್ಷೇತ್ರದಲ್ಲಿ ಸಂಶೋಧನೆ ಇಲ್ಲಿಯವರೆಗೂ ನಡೆದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಕರ್ನಾಟಕದಲ್ಲಿ ಸಂಶೋಧನಾ ಅಧ್ಯಯನ ಕಳೆದೆರಡು ದಶಕ ಗಳಿಂದ ಸ್ವಲ್ಪ ಮಟ್ಟಿಗೆ ಪ್ರಾರಂಭಗೊಂಡಿವೆ. ಅದು ಇನ್ನೂ ಶೈಶವಾವಸ್ಥೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಇಲ್ಲಿಯವರೆಗೆ

ದೃಶ್ಯಕಲಾ ಕ್ಷೇತ್ರದಲ್ಲಿ ಬಹುಪಾಲು ಅಧ್ಯಯನಗಳು ಈಗ ನಡೆದಿದ್ದು, ಚಿತ್ರಕಲೆ ಮತ್ತು ಶಿಲ್ಪಕಲೆ, ಒಂದೆರಡು ಅಧ್ಯಯನಗಳು ಆನ್ವಯಿಕ ಕಲೆಯ ಕುರಿತು ನಡೆದಿರುವುದು ಕಂಡುಬರುತ್ತದೆ. ದೃಶ್ಯಕಲೆಯಲ್ಲಿ ಚಿತ್ರ, ಶಿಲ್ಪ, ವಾಸ್ತುಶಿಲ್ಪ, ಛಾಯಾಚಿತ್ರ, ಆನ್ವಯಿಕ ಕಲೆ, ಮುದ್ರಣಕಲೆ ಮುಂತಾದ ವಿಷಯಗಳ ಕುರಿತು ಇನ್ನೂ ವ್ಯಾಪಕವಾಗಿ ಅಧ್ಯಯನಗಳಾಗುವ ಅವಶ್ಯಕತೆಯಿದೆ. ದೃಶ್ಯಕಲಾ ಕ್ಷೇತ್ರವು ಅಧ್ಯಯನಕಾರರಿಗೆ ಒಂದು ಕನ್ನೆನೆಲವಾಗಿದೆ. ಇಲ್ಲಿ ಸಾಕಷ್ಟು ಅಧ್ಯಯನಕ್ಕೆ ಅವಕಾಶಗಳಿವೆ. ಸ್ಥೂಲವಾಗಿ ಕೆಲವು ಆಧ್ಯತೆಯ ಕ್ಷೇತ್ರಗಳನ್ನು ಇಲ್ಲಿ ಹೆಸರಿಸಲಾಗಿದೆ.

---

ಸುಮಾರು ೬೦ರಷ್ಟು ದೃಶ್ಯಕಲೆಯಲ್ಲಿ ಪಿಹೆಚ್.ಡಿ ಅಧ್ಯಯನಗಳು ನಡೆದಿರುವುದು, ೫೦ ಎಂ.ಫಿಲ್ ಅಧ್ಯಯನಗಳು, ೮ ಡಿ.ಲಿಟ್ ಅಧ್ಯಯನಗಳು ನಡೆದಿರುವುದು ಈ ಕ್ಷೇತ್ರದಲ್ಲಿ ಸಂಶೋಧನೆ ಈಗ ತಾನೆ ಚೇತರಿಸಿಕೊಂಡು ಮುನ್ನಡೆಯುತ್ತಲಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ದೃಶ್ಯಕಲೆಯ ಸಂಶೋಧನೆಗೆ ಸಂಬಂಧಿಸಿದಂತೆ ಸರಿಯಾದ ಸಂಶೋಧನಾ ವಿಧಿ-ವಿಧಾನಗಳ ಕುರಿತಾದ ಗ್ರಂಥಗಳ ಬಹುದೊಡ್ಡ ಕೊರತೆಯು ಇಲ್ಲದೆಯೆಂದು ಹೇಳಿದರೆ ತಪ್ಪಾಗಲಾರದು. ಈಗಲೂ ಸಾಹಿತ್ಯ, ಇತಿಹಾಸ ಮುಂತಾದ ಕ್ಷೇತ್ರಗಳಲ್ಲಿ ನಡೆಯುವ ಸಂಶೋಧನಾ ವಿಧಿ-ವಿಧಾನಗಳ (Research Methodology)ನ್ನೇ ಬಹುವಾಗಿ ಆಶ್ರಯಿಸಿಕೊಂಡು ಅಧ್ಯಯನಗಳು ನಡೆಯುತ್ತಲಿವೆ. ಇದಕ್ಕೆಲ್ಲಾ ಕಾರಣ ಸ್ನಾತಕೋತ್ತರ ಹಂತದಲ್ಲಿ ದೃಶ್ಯಕಲೆ ಅಧ್ಯಯನ ಬಹಳಷ್ಟು ತಡವಾಗಿ ಬಂದಿರುವುದು ಒಂದಾದರೆ, ಸಂಶೋಧನೆ ಮಾಡಿದ ಸಂಶೋಧಕರ ಬಹುದೊಡ್ಡ ಕೊರತೆಯನ್ನು ಈ ಕ್ಷೇತ್ರ ಅನುಭವಿಸುತ್ತಿದೆ. ಆದಾಗ್ಯೂ ಸ್ವಲ್ಪಮಟ್ಟಿನ ಆಶಾದಾಯಕದ ಸನ್ನಿವೇಶವನ್ನು ಕಳೆದೆರಡು ದಶಕಗಳಿಂದ ಕಾಣುತ್ತಿದ್ದೇವೆ. ಈಗ ಕನ್ನಡ ವಿಶ್ವವಿದ್ಯಾಲಯ, ಗುಲ್ಬರ್ಗಾ ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಮೈಸೂರು ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯಗಳಲ್ಲಿ ದೃಶ್ಯಕಲೆಯಲ್ಲಿ ಸಂಶೋಧನೆಗೆ ಸಿಕ್ಕ ಪ್ರೋತ್ಸಾಹದಿಂದ ಹಲವಾರು ಸಂಶೋಧನಾ ಅಧ್ಯಯನಗಳು ನಡೆದಿವೆ ಮತ್ತು ನಡೆಯುತ್ತಲಿವೆ.

ಸಂಶೋಧನಾಧ್ಯಯನದ ಅಗತ್ಯ ಎಲ್ಲ ಕ್ಷೇತ್ರಗಳಿಗೆ ಇರುವಂತೆ ಈ ಕ್ಷೇತ್ರವೂ ಬಹುದೊಡ್ಡ ಪರಂಪರೆಯನ್ನು ಹೊಂದಿದ್ದು, ಈ ಕ್ಷೇತ್ರದ ವೈವಿಧ್ಯಮಯವಾದ ವಸ್ತುವಿಷಯಗಳ ಕುರಿತು, ಕರ್ನಾಟಕ, ಭಾರತ, ವಿದೇಶಗಳಲ್ಲಿ ನಡೆದಿರುವ ಹೊಸ ಹೊಸ ಶೋಧಗಳ ಕುರಿತು, ಅಜ್ಞಾತವಾಗಿರುವ ವಿಷಯಗಳ ಕುರಿತು ಸಂಶೋಧನೆ ನಡೆಯಬೇಕಾದ ಅತ್ಯಂತ ತುರ್ತು ಸಂದರ್ಭದಲ್ಲಿ ನಾವಿದ್ದೇವೆ. ಈ ಕ್ಷೇತ್ರಕ್ಕೆ ದೃಶ್ಯಕಲೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಹೊಂದಿದ ವಿಶ್ವವಿದ್ಯಾಲಯದ ನಿಯಮಾನುಸಾರ ಇಂದು ನೂರಾರು ವಿದ್ಯಾರ್ಥಿಗಳು ಆಸಕ್ತಿಯನ್ನು ವಹಿಸಿ ಅಧ್ಯಯನ ಮಾಡಲು ಕಾತುರರಾಗಿದ್ದಾರೆ. ಆದರೆ, ಅವರಿಗೆ ಸಿಗಬೇಕಾದ ದೊಡ್ಡ ಪ್ರಮಾಣದ ಮಾರ್ಗದರ್ಶಕರ ಕೊರತೆ ಇಂದು ಕರ್ನಾಟಕದಲ್ಲಿ ಎದ್ದುಕಾಣುವ ಅಂಶವಾಗಿದೆ. ಮುಂಬರುವ ದಿನಗಳಲ್ಲಿ ಈ ಕೊರತೆ ಹೋಗಿ, ಒಳ್ಳೆಯ ದಿನಗಳು ಬರುವ ನಿರೀಕ್ಷೆಯನ್ನು ಹೊಂದಬೇಕಾಗಿದೆ.

1. ಕರ್ನಾಟಕದಲ್ಲಿ ಇಲ್ಲಿಯವರೆಗೆ ನಡೆದ ದೃಶ್ಯಕಲೆಯ ಸಂಶೋಧನಾ ಅಧ್ಯಯನಗಳ ಸ್ಥೂಲನೋಟ

1.1. ವಿಶ್ವವಿದ್ಯಾಲಯದ ವಿವಿಧ ಪದವಿಗಳಿಗಾಗಿ ನಡೆದ ಸಂಶೋಧನೆಗಳು

1.1.1. ಪದವಿ ಮತ್ತು ಸ್ನಾತಕೋತ್ತರ ಹಂತದ ಕಿರು ಸಂಶೋಧನಾ ಪ್ರಬಂಧಗಳು

1.1.2. ಎಂ.ಫಿಲ್ ಪದವಿಗಾಗಿ ನಡೆಸಿದ ಸಂಶೋಧನಾ ಪ್ರಬಂಧಗಳು

1.1.3. ಪಿಹೆಚ್.ಡಿ ಪದವಿಗಾಗಿ ನಡೆಸಿದ ಸಂಶೋಧನಾ ಪ್ರಬಂಧಗಳು

1.1.4. ಡಿ.ಲಿಟ್ ಪದವಿಗಾಗಿ ನಡೆಸಿದ ಸಂಶೋಧನಾ ಪ್ರಬಂಧಗಳು

1.2. ಪದವಿಯೇತರ ಅನುದಾನ / ಅನುದಾನ ರಹಿತ ಸಂಶೋಧನಾ ಅಧ್ಯಯನಗಳು

2. ಸಂಶೋಧನೆ ನಡೆಯಬೇಕಾದ ಕೆಲವು ಪ್ರಮುಖ ಆಧ್ಯತೆಯ ಕ್ಷೇತ್ರಗಳು

ಈ ಮೇಲಿನ ರೀತಿಯಲ್ಲಿ ಅಧ್ಯಯನದ ಅನುಕೂಲತೆಗಾಗಿ ವಿಂಗಡೆಯನ್ನು ಮಾಡಿಕೊಂಡು ಇಲ್ಲಿ ವಿವೇಚನೆಯನ್ನು ಮಾಡಲಾಗಿದೆ.

## 1.1. ವಿಶ್ವವಿದ್ಯಾಲಯದ ವಿವಿಧ ಪದವಿಗಳಿಗಾಗಿ ನಡೆದ ಸಂಶೋಧನೆಗಳು

### 1.1.1. ಪದವಿ ಮತ್ತು ಸ್ನಾತಕೋತ್ತರ ಹಂತದ ಕಿರುಸಂಶೋಧನಾ ಪ್ರಬಂಧಗಳು

ಕರ್ನಾಟಕದಲ್ಲಿ ದೃಶ್ಯಕಲಾ ಶಿಕ್ಷಣ ಡಿಪ್ಲೋಮಾ ಹಂತದಿಂದ ಪದವಿ ಹಂತಕ್ಕೆ ಮಾರ್ಪಟ್ಟಿದ್ದು, ಪದವಿ ಹಂತದಲ್ಲಿ ವಿದ್ಯಾರ್ಥಿಗಳಿಗೆ ಸಂಶೋಧನೆಯ ಪ್ರಜ್ಞೆಯನ್ನು ಮೂಡಿಸುವ ಮತ್ತು ಬರವಣಿಗೆಯಲ್ಲಿ ಆಸಕ್ತಿಯನ್ನು ಗುರುತಿಸುವ, ಓದಿನ ಕಡೆಗೆ ಗಮನಹರಿಸುವ ದಿಸೆಯಲ್ಲಿ ಕಿರು ಸಂಶೋಧನಾ ಪ್ರಬಂಧಗಳನ್ನು ಬರೆಯುವ ಪರಂಪರೆಯನ್ನು ಕನ್ನಡ ವಿಶ್ವವಿದ್ಯಾಲಯ ಕಲಾ ಮಹಾವಿದ್ಯಾಲಯಗಳ ಪದವಿ ತರಗತಿಗಳಿಗೆ ಕಡ್ಡಾಯದ ವಿಷಯವಾಗಿ ಹೊಸ ಪಠ್ಯಕ್ರಮ ಬಂದ ಕಾರಣ ಇಲ್ಲಿ ಕಿರುಪ್ರಬಂಧಗಳು ಹೇರಳವಾಗಿ ರಾಜ್ಯದ ಎಲ್ಲ ಕಲಾಮಹಾವಿದ್ಯಾಲಯಗಳ ಬಿ.ವಿ.ಎ/ ಬಿ.ಎಫ್.ಎ ಅಂತಿಮ ವರ್ಷದ ವಿದ್ಯಾರ್ಥಿಗಳಿಂದ ರಚನೆಯಾಗುತ್ತಲಿವೆ. ಇವುಗಳ ಸಂಖ್ಯೆ 2000ಕ್ಕೂ ಮಿಕ್ಕಿವೆ. ಹಾಗೆಯೇ ಇಲ್ಲಿ ಅಧ್ಯಯನ ಮುಂದುವರೆದಿದೆ. ಹಾಗೆಯೇ ಸ್ನಾತಕೋತ್ತರ ಹಂತದಲ್ಲಿಯೂ ಸಹ ಇದೇ ರೀತಿ ಅಂತಿಮ ವರ್ಷದ ವಿದ್ಯಾರ್ಥಿಗಳು ತಮ್ಮ ಪದವಿಯ ಭಾಗಶಃ ಅವಶ್ಯಕತೆಗಾಗಿ ಕಿರುಪ್ರಬಂಧಗಳ ರಚನೆ ಕಾರ್ಯವು ನಡೆಯುತ್ತಿದ್ದು, ಇಲ್ಲಿಯೂ ವಿದ್ಯಾರ್ಥಿಗಳು ಮುಂದೆ ಎಂ.ಫಿಲ್., ಪಿಹೆಚ್.ಡಿ ಅಧ್ಯಯನಕ್ಕೆ ಸಿದ್ಧಗೊಳ್ಳುವ ಪೂರ್ವಭಾವಿಯ ಹಂತವಾಗಿ ಇಂತಹ ಅಧ್ಯಯನಗಳು ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿವೆ. ಇವುಗಳ ಸಂಖ್ಯೆಯು 1000ಕ್ಕೂ ಮಿಕ್ಕಿದೆ.

### 1.1.2. ಎಂ.ಫಿಲ್ ಪದವಿಗಾಗಿ ನಡೆಸಿದ ಸಂಶೋಧನಾ ಪ್ರಬಂಧಗಳು

ದೃಶ್ಯಕಲೆಯಲ್ಲಿ ಯು.ಜಿ.ಸಿ. ಮಾರ್ಗದರ್ಶಿ ಸೂತ್ರದನ್ವಯ ಕರ್ನಾಟಕದಲ್ಲಿ ದೃಶ್ಯಕಲೆಯಲ್ಲಿ ಎಂ.ಫಿಲ್ ಸಂಶೋಧನಾಧ್ಯಯನವು ಪ್ರಾರಂಭಗೊಂಡಿದೆ. ಮೊದಲ ಬಾರಿಗೆ ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಇದು ಆರಂಭಗೊಂಡಿತು. ಈಗ ಕನ್ನಡ ವಿಶ್ವವಿದ್ಯಾಲಯದಲ್ಲಿ ಮಾತ್ರ ಎಂ.ಫಿಲ್. ಸಂಶೋಧನಾ ಅಧ್ಯಯನ ನಡೆಯುತ್ತಿದೆ. ಎಂ.ಫಿಲ್ ಅಧ್ಯಯನ ನಡೆದು ಬಂದ ಸ್ಥೂಲನೋಟವನ್ನು ಇಲ್ಲಿ ಕಾಣಬಹುದು.

2002ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರ ಚಿತ್ರಕಲಾವಿದ ಜೆ.ಎಸ್.ಖಂಡೇರಾವ : ಒಂದು ಅಧ್ಯಯನ, 2003ರಲ್ಲಿ ಎ.ಎಸ್. ವಿಶ್ವನಾಥ ಅವರ ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು, 2005ರಲ್ಲಿ ಸಿ.ಡಿ. ಜಟ್ಟೆಣ್ಣನವರ ಅವರ ಎಂ. ವಿ. ಮಿಣಜಗಿಯವರ

ಜೀವನ ಮತ್ತು ಕಲಾಬದುಕು, ಶಂಕ್ರಪ್ಪ ಎಂ. ಕುಂದಗೋಳರ ಡಿ. ವಿ. ಹಾಲಭಾವಿಯವರ ಜೀವನ ಮತ್ತು ಕಲಾಬದುಕು, 2006ರಲ್ಲಿ ಸುಚಿತ್ರಾ ಲಿಂಗದಳ್ಳಿಯವರ ವಿಜಯನಗರದ ಭಿತ್ತಿ ಚಿತ್ರಕಲೆ, ರಾಜಕುಮಾರ ಎಸ್. ಕಾಳೆ ಅವರ ಔಂಧ್ ಗ್ಯಾಲರಿ, ಕುರಿತು. 2007ರಲ್ಲಿ ಜಿತೇಂದ್ರ ಜಿ. ಕೋತಳಕರ ಅವರ ಕಲಾವಿದ ವಿದ್ಯಾಭೂಷಣರ ಕಲಾಕೃತಿಗಳು, ಬಿ.ಎಂ. ಪಾಟೀಲರ ನಿಪ್ಪಾಣಿ ವಾಡೆಯ ಭಿತ್ತಿ ಚಿತ್ರಗಳು, ಉಮೇಶ ಎ.ಎಸ್. ಕರ್ನಾಟಕ ಜೈನ ಚಿತ್ರಕಲೆ, ರವಿ ವಸಾರಾಮ ನಾಯಕರ ಕಿನ್ನಾಳ ಕಲೆ, ಶಶಿಕಾಂತ ಬಸರಿಕಟ್ಟಿಯವರ ಕಲಘಟಗಿಯ ಚಿತ್ರಕಲೆ, ಶೈಲಾ ಬರಡೋಲರ ಸಂತ ಕಲಾವಿದ ಶುಭಾರಾಯರ ಜೀವನ ಮತ್ತು ಕಲಾಕೃತಿಗಳು, ಎಂಬ ಪ್ರಬಂಧಗಳು ಹೊರಬಂದಿವೆ. 2008ರಲ್ಲಿ ಕೃಷ್ಣವೇಣಿ ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಯೋಗೀಶ ಹೆಚ್. ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ ಮಹಾಕೂಟೇಶ್ವರಗೌಡ ಪಾಟೀಲ ಬೆಳಗಾವಿ ಜಿಲ್ಲೆಯ ಚಿತ್ರಕಲೆ. ಸುರೇಶ ಬಡಿಗೇರರ ಕನ್ನಡ ವಿಶ್ವವಿದ್ಯಾಲಯದ ಸಂಗ್ರಹದ ಹಸ್ತಪ್ರತಿಗಳ ಚಿತ್ರಕಲೆ, ಸಂತೋಷಕುಮಾರ ಕುಲಕರ್ಣಿ ಅವರ ದಾವಣಗೆರೆ ಜಿಲ್ಲೆಯ ಚಿತ್ರಕಲೆ, ಜಯರಾಜ ಚಿಕ್ಕಪಾಟೀಲರ ಕರ್ನಾಟಕದ ಜಾಹೀರಾತುಗಳಲ್ಲಿ ಸಾಂಸ್ಕೃತಿಕ ನೆಲೆಗಳು, ಮಹೇಶ ಉಮತಾರ ಅವರ ಬಿ.ಪಿ. ಬಾಯಿರಿ – ಕಲೆ ಮತ್ತು ಕಲಾಸಾಹಿತ್ಯ, ಗಿರಿಜಾ ಬಿರಾದಾರರ ವಿಜಾಪೂರ ಜಿಲ್ಲೆಯ ಚಿತ್ರಕಲೆ, ಬಸಯ್ಯ ಗವಿಮಠ ಅವರ ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ, ಕೃಷ್ಣೇಗೌಡ ಹೆಚ್.ಎನ್. ಅವರ ಕರ್ನಾಟಕದಲ್ಲಿ ಟಿಬೇಟಿಯನ್ನರ ಚಿತ್ರಕಲೆ, ಮಹಾಂತೇಶ ಪಲದಿನ್ನಿ ಅವರ ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು, ಮತ್ತು 2009ರಲ್ಲಿ ಕಾಂತರಾಜ ಅವರ ಸಿಬಿ ದೇವಾಲಯದ ಭಿತ್ತಿ ಚಿತ್ರಕಲೆ, ರಂಗಸ್ವಾಮಿ ಅವರ ಚಿತ್ರಕಲಾವಿದ ರುಮಾಲೆ ಚನ್ನಬಸಯ್ಯನವರ ಬದುಕು ಮತ್ತು ಕಲೆ, ಶ್ಯಾಮ ತಾ. ಜಮಾದಾರ ಅವರ ಕಲಾವಿದ ಸಿ.ಎನ್. ಪಾಟೀಲರ ಬದುಕು ಮತ್ತು ಕಲಾಕೃತಿಗಳು, 2010ರಲ್ಲಿ ಭಾನುಮತಿ ಕೆ.ಎಲ್. ಅವರ ಚಿತ್ರಕಲಾವಿದ ಎಂ.ಜಿ. ವಾಚೇದಮಠ ಬದುಕು ಮತ್ತು ಕಲಾಕೃತಿಗಳು, ದಿನೇಶ ಬಿ. ಅವರ ಚನ್ನಪಟ್ಟಣದ ಚಿತ್ತಾರ ಗೊಂಬೆಗಳು, ವಾದಿರಾಜ ಎ. ಅವರ ಕಲಾವಿದ ಎಲ್. ಶಿವಲಿಂಗಪ್ಪನವರ ಜೀವನ ಕಲಾಕೃತಿಗಳು, ಚಿಂತಾಮಣಿ ಅವರ ಕರ್ನಾಟಕದ ಚಿತ್ರಕಲೆಯಲ್ಲಿ ದಶಾವತಾರದ ಕಲ್ಪನೆ. 2012ರಲ್ಲಿ ಮಲ್ಲಿಕಾರ್ಜುನ ಕೆ.ಜಿ. ಅವರ ಕೆ.ಕೆ. ಹೆಬ್ಬಾರರ ಕಲೆ ಮತ್ತು ಬದುಕು, ರಾಜೀವ್. ಎಂ.ವೈ ಅವರ ಕೆ. ವೆಂಕಟಪ್ಪನವರ ಜೀವನ ಮತ್ತು ಕಲಾಕೃತಿಗಳು, ರಾಘವೇಂದ್ರ ಅವರ ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ವೈಶಾಲಿ ಕೆ. ಕಾಂಬಳೆ ಅವರ ಬೀದರ ಜಿಲ್ಲೆಯ ಚಿತ್ರಕಲೆ, ಶಶಿಕಲಾ ಜಿ.ವಿ. ಅವರ ಕರ್ನಾಟಕದ ವ್ಯಂಗ್ಯ ಚಿತ್ರಕಲೆ, ಎನ್.ಜಿ. ಅಂಬರೀಶ್ ಅವರ ಕರ್ನಾಟಕದ ಆಧುನಿಕ ಭಿತ್ತಿಚಿತ್ರ / ಶಿಲ್ಪಕಲೆ, ಸುರೇಂದ್ರನಾಥ ಡಿ.ಆರ್. ಅವರ ಕರಾವಳಿ ಕರ್ನಾಕಟದ ಕ್ರೈಸ್ತಚಿತ್ರಕಲೆ, ಶ್ವೇತಾ ಡಿ.ಎಸ್. ಅವರ ರಾಜಾ ರವಿವರ್ಮನ ಕಲಾಕೃತಿಗಳಲ್ಲಿನ ಸ್ತ್ರೀ ಚಿತ್ರಣ, ಮಹಾದೇವಪ್ಪ ಸಣತಂಗಿಯವರ ಕರ್ನಾಟಕದ ದೃಶ್ಯಕಲೆಯಲ್ಲಿ ಗಣೇಶ ಚಿತ್ರಣ. 2013ರಲ್ಲಿ ದಯಾನಂದ ಕೋಳಿ ಅವರ ಕೊಪ್ಪಳ ಜಿಲ್ಲೆಯ ಚಿತ್ರಕಲೆ, ಸವಿತಾ ಬಡಿಗೇರ ಅವರ ಧಾರವಾಡ ಜಿಲ್ಲೆಯ ಚಿತ್ರಕಲೆ, ಹೇಮಂತಕುಮಾರ ಅವರ ಮೈಸೂರು ಜಿಲ್ಲೆಯ ಚಿತ್ರಕಲೆ, ಬಸವರಾಜ ಕಲೆಗಾರ ಅವರ ಯಾದಗಿರಿ ಜಿಲ್ಲೆಯ ಚಿತ್ರಕಲೆ, 2014ರಲ್ಲಿ ಡಿ. ಕೆ. ಕೀರ್ತಿವರ್ಮ ಅವರ ಕೆ ರಾಮಚಂದ್ರನ್‌ರವರ ಕಲೆ ಮತ್ತು ಬದುಕು, ವಿಶ್ವನಾಥ್ ಹೆಚ್. ಹಂಡಿ ಅವರ ಕೆ. ವಿ. ಸುಬ್ರಹ್ಮಣ್ಯ ಅವರ ದೃಶ್ಯಕಲಾ ಸಾಹಿತ್ಯ, ಗಾಯತ್ರಿ ಮಂತ ಅವರ ಪಿ. ಎಸ್.

ಕಡೇಮನಿಯವರ ಕಲೆ ಮತ್ತು ಬದುಕು, ಎಲ್. ಟಿ. ಮಂಜುಳಾಬಾಯಿ ಅವರ ಕೆ. ಜ್ಞಾನೇಶ್ವರ್‌ರವರ ಕಲೆ ಮತ್ತು ಬದುಕು, ಸಾವಿತ್ರಿ ಟೆಂಕಲಿ ಅವರ ಎಂ. ಆರ್. ಬಾಳೇಕಾಯಿಯವರ ಕಲೆ ಮತ್ತು ಬದುಕು, ಖಾದರ್‌ಸಾಬ್ ಇ. ಗುಳೇದಗುಡ್ಡ ಅವರ ಬಹುಮುಖ ಕಲಾಸಾಧಕ ವಿ.ಜಿ. ಅಂದಾನಿ, ಮಾಯಾದೇವಿ ಮಮ್ಮಾ ಅವರ ಎ. ಎಸ್. ಪಾಟೀಲ್‌ರವರ ಕಲೆ ಮತ್ತು ಬದುಕು, ರಾಜಪ್ಪ ಹೆಚ್. ಅವರ ಬಾಗೂರು ಮಾರ್ಕಂಡೇಯ ಅವರ ಚಿತ್ರಕಲೆ ಮತ್ತು ಸಾಹಿತ್ಯ, 2015ರಲ್ಲಿ ಅಶೋಕ ಸಿ. ನಡುವಿನಮನಿ ಅವರ ಹೈದ್ರಾಬಾದ ಕರ್ನಾಟಕದ ಭಾವಚಿತ್ರ ಕಲಾವಿದರು – ಒಂದು ಅಧ್ಯಯನ, ವೆಂಕಟೇಶ ಕೆ. ಹೆಚ್. ಅವರ ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ, ಆಸಂಗಪ್ಪ ಗುಳೇದಗುಡ್ಡ ಅವರ ದೃಶ್ಯಕಲಾ ಕ್ಷೇತ್ರಕ್ಕೆ ಅಕ್ಕಿ ಮನೆತನದ ಕೊಡುಗೆ, ನಟರಾಜ ಎಂ.ಶಿಲ್ಪಿ ಅವರ ಕನಗನಹಳ್ಳಿಯ ಸ್ತೂಪ ಶಿಲ್ಪಗಳು, ಬಸವರಾಜ ರೊಳ್ಳಿ ಅವರ ವಿಜಯಪುರ ಜಿಲ್ಲೆಯ ಸಮಕಾಲೀನ ಚಿತ್ರಕಲೆ, ಸಂತೋಷ ಮಾ. ಬೇವಿನಮರದ ಹಂಪಿ ಪರಿಸರದ ಹನುಮನ ಪ್ರತಿಮೆಗಳ ಅಧ್ಯಯನ (ದೃಶ್ಯಕಲೆಗಳನ್ನು ಆಧರಿಸಿ), ವೆಂಕಟೇಶ ಪಾಟೀಲ ಅವರ ದಶಕದ ದೃಶ್ಯಕಲಾ ಸಾಹಿತ್ಯ – ವಿಮರ್ಶಾತ್ಮಕ ಅಧ್ಯಯನ (2004–2014) ಈ ಎಂ.ಫಿಲ್ ಪ್ರಬಂಧಗಳು ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನಾ ಅಧ್ಯಯನಗಳಾಗಿವೆ.

ಪ್ರಸ್ತುತ 2016ರಲ್ಲಿ ಸಂಗಪ್ಪ ಕೋತಂಬರಿಯವರು ಚಿಕ್ಕಮಕ್ಕಳ ಚಿತ್ರಕಲೆ, ಅಮೀನರೆಡ್ಡಿಯವರ ವಿಜಯನಗರ ಕಾಲದ ಲೇಪಾಕ್ಷಿ ಭಿತ್ತಿಚಿತ್ರಕಲೆ, ವೀರೇಶ ರುದ್ರಸ್ವಾಮಿಯವರ ಕರ್ನಾಟಕದ ಭಾವಚಿತ್ರಕಲೆ(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ), ಬಸವರಾಜ ಕಿಶೋರ ಅವರ ಕರ್ನಾಟಕದಲ್ಲಿ ಸಂಯೋಜನಾ ಚಿತ್ರಕಲೆ(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ), ಸಂಗಮ ದೊಡ್ಡಮನಿಯವರ ದೃಶ್ಯಕಲಾ ಶಿಕ್ಷಣಕ್ಕೆ ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ನ ಕೊಡುಗೆ, ನಿಜಲಿಂಗ ಮುಗಳಿಯವರ ಕರ್ನಾಟಕದ ರಾಗಮಾಲಾ ಚಿತ್ರಕಲೆ ಈ ವಿಷಯಗಳ ಕುರಿತು ಅಧ್ಯಯನ ನಡೆಯುತ್ತಿದ್ದು, ಈ ತಿಂಗಳಾಂತ್ಯದಲ್ಲಿ ವಿಶ್ವವಿದ್ಯಾಲಯಕ್ಕೆ ಸಲ್ಲಿಕೆಯಾಗಲಿವೆ.

### 1.1.3. ಪಿಹೆಚ್.ಡಿ. ಮಹಾಪ್ರಬಂಧಗಳು

ದೃಶ್ಯಕಲೆಯಲ್ಲಿ ಎಂ.ಫಿಲ್ ಪದವಿಯಂತೇ ಪಿಹೆಚ್.ಡಿ ಪದವಿಯ ಅಧ್ಯಯನಕ್ಕೂ ಇಲ್ಲಿ ಅವಕಾಶ ದೊರಕಿದ್ದು, ಅವುಗಳ ಸ್ಥೂಲನೋಟವನ್ನು ಸಹ ಇಲ್ಲಿ ನೋಡಬಹುದಾಗಿದೆ. 1987ರಲ್ಲಿ ಡಾ. ಚೂಡಾಮಣಿ ನಂದಗೋಪಾಲರ ಡ್ಯಾನ್ಸ್ ಆಂಡ್ ಅದರ್ ಫೈನ್ ಆರ್ಟ್ಸ್ ಇನ್ ಕರ್ನಾಟಕ ಸ್ಕಲ್ಪಚರ್ ಅಂಡ್ ಪೇಂಟಿಂಗ್ಸ್ ಎಂಬ ಪಿಹೆಚ್.ಡಿ. ಮಹಾಪ್ರಬಂಧವು ಮೈಸೂರು ವಿಶ್ವವಿದ್ಯಾಲಯದಿಂದ ಬಂದಿದೆ. ಕರ್ನಾಟಕ ವಿಶ್ವವಿದ್ಯಾಲಯದಿಂದ ಡಾ. ಬಿ.ಕೆ. ಹಿರೇಮಠರ ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ ಎಂಬ ಪಿಎಚ್.ಡಿ. ಪ್ರಬಂಧ ಬಂದಿದ್ದು, ಇವು ಪ್ರಾರಂಭಿಕ ಹಂತದಲ್ಲಿ ನಡೆದ ದೃಶ್ಯಕಲೆಯ ಕುರಿತು ಬಂದಿರುವ ಅಂಶಿಕವಾದಂತಹ ಅಧ್ಯಯನಗಳಾಗಿವೆ.

ಚಿತ್ರಕಲೆಯನ್ನೇ ಕುರಿತು ಕರ್ನಾಟಕದಲ್ಲಿ ಸಂಶೋಧನಾಧ್ಯಯನವು ಪೂರ್ಣಪ್ರಮಾಣದಲ್ಲಿ ಕಂಡುಬಂದಿರುವುದು 1991ರಲ್ಲಿ. ಇಲ್ಲಿ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ ಕರ್ನಾಟಕ ಜನಪದ ಚಿತ್ರಕಲೆ ಮೊದಲ ಅಧ್ಯಯನವೆಂದು ದಾಖಲಾಗಿದೆ.

1995ರಲ್ಲಿ ಡಾ. ಅ. ಲ. ನರಸಿಂಹನ್ ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, 1997ರಲ್ಲಿ ಡಾ. ಸಂಪದಾ ಭಟ್ ಅವರ ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲಾ ಚಿತ್ರಗಳು, ಕನ್ನಡ ವಿಶ್ವವಿದ್ಯಾಲಯಕ್ಕೆ, 1997ರಲ್ಲಿ ಡಾ. ಪುಷ್ಪಾ ದ್ರಾವಿಡ ಅವರು ಮಂಡಿಸಿದ ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು, 2001ರಲ್ಲಿ ಡಾ. ಯಾದಪ್ಪ ಪರದೇಶಿಯವರ ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಒಂದು ಅಧ್ಯಯನ, 2002ರಲ್ಲಿ ಡಾ. ಶಿವಾನಂದ ಬಂಟನೂರು ಅವರ ಕರ್ನಾಟಕ ಜನಪದ ಶಿಲ್ಪಕಲೆ : ಒಂದು ಅಧ್ಯಯನ, ಡಾ. ಗಿರೀಶ ಅವರ ಬುಡಕಟ್ಟು ಚಿತ್ರಕಲೆ, 2002ರಲ್ಲಿ ಡಾ. ಲಕ್ಷ್ಮೀದೇವಿ ಗವಾಯಿಯವರ ಕಲಾವಿದ ಎಂ.ಎ.ಚೆಟ್ಟಿಯವರ ಜೀವನ- ಕಲಾಕೃತಿಗಳು : ಒಂದು ಅಧ್ಯಯನ, ಡಾ. ಶಂಕ್ರಪ್ಪ ಕೋಲ್ಕಾರ್ ಅವರ ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ, ಡಾ. ಸೌಮ್ಯಾ ಅವರ ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್, ಡಾ. ಪ್ರಮಿಳಾ ಲೋಚನ ಅವರ ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್‌ಮೆಂಟ್ ಆಫ್ ರಾಗಮಾಲಾ ಆಂಡ್ ಕಾಂಟೆಂಪರರಿ ಪೇಂಟಿಂಗ್, 2003ರಲ್ಲಿ ಡಾ. ವೀಣಾ ಶೇಖರ ಮಂಡಿಸಿದ ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (1780 -1820), ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ ಅವರ ಕಲಾವಿದ ಆರ್.ಎಮ್. ಹಡಪದ : ಒಂದು ಅಧ್ಯಯನ, ಡಾ. ಎಸ್.ಸಿ.ಪಾಟೀಲರು ಕರ್ನಾಟಕ ವಿ.ವಿ.ಗೆ ಮಂಡಿಸಿದ ಎ ಕ್ರಿಟಿಕಲ್ ಅನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಎಟ್ ಸ್ಕೂಲ್ ಲೆವಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫರನ್ಸ್ ಟು ಡ್ರಾಯಿಂಗ್ ಆಂಡ್ ಪೇಂಟಿಂಗ್, ಇದು ಡಾ. ಎಸ್. ಸಿ. ಪಾಟೀಲ ಅವರ ಎರಡನೆಯ ಪಿಹೆಚ್.ಡಿ ಮಹಾಪ್ರಬಂಧವಾಗಿದೆ.

2004ರಲ್ಲಿ ಡಾ. ವಿ. ಎಂ. ಬಾಗಾಯತ್ ಅವರ ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ : ಒಂದು ಅಧ್ಯಯನ (1400-1800), ಡಾ. ಶಿವಕುಮಾರ. ಜಿ.ಓ. ಅವರ ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಡಾ. ಪಿ. ಗೌರೀಶ ಅವರ ಮೈಸೂರು ಜಿಲ್ಲೆಯ ಜನಪದ ಚಿತ್ರಕಲೆ, 2005ರಲ್ಲಿ ಡಾ. ಶಶಿಕಲಾ ಹೂಗಾರ ಅವರ ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಡಾ. ಶಿವಪ್ರಕಾಶ ತುಕ್ಕಣ್ಣವರ ಅವರ ಕರ್ನಾಟಕ ರಥ ಶಿಲ್ಪಕಲೆ, ಡಾ. ಎಚ್.ಎನ್. ಚಿತ್ರಗಾರ ಅವರ ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಡಾ. ಎಸ್.ವಿ.ವೆಂಕಟೇಶಯ್ಯ ಅವರ ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು : ಒಂದು ಅಧ್ಯಯನ, 2006ರಲ್ಲಿ ಡಾ. ವಿಶ್ವೇಶ್ವರಿ ತಿವಾರಿ ಅವರ ರಂಗೋಲಿ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, 2007ರಲ್ಲಿ ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ ಅವರ ಸುರಪುರ ಶೈಲಿಯ ಚಿತ್ರಕಲೆ-ಒಂದು ಅಧ್ಯಯನ, ಡಾ.ಗೀತಾಂಜಲಿ ಬಿ. ಆರ್. ಅವರ ಕರ್ನಾಟಕದ ಐತಿಹಾಸಿಕ ದೀಪಸ್ತಂಭಗಳು, ಡಾ. ರಾಠೋಡ್ ಅವರ ಅನ್ವಯಿಕ ಕಲೆ-ಹಿಂದಿನಿಂದ ಇಂದಿನವರೆಗೆ, 2008ರಲ್ಲಿ ಡಾ. ಮೋಹನ್ ರಾವ್ ಬಿ. ಪಂಚಾಳ ಅವರ ಚಿತ್ರಕಲಾವಿದ ಎಸ್. ಎಂ. ಪಂಡಿತ್-ಬದುಕು ಮತ್ತು ಕಲೆ, ಡಾ. ವಿಶ್ವನಾಥ ಎ.ಎಸ್. ಅವರ ಕರಾವಳಿ ಕರ್ನಾಟಕದ ಯಕ್ಷಗಾನ ಮುಖವರ್ಣಿಕೆ ಹಾಗೂ ವೇಷಭೂಷಣಗಳು, ಡಾ. ರವೀಂದ್ರ ಎಸ್. ಕಮ್ಮಾರ ಅವರ ಕಲಾವಿದ ವಿ.ಬಿ. ಹಿರೇಗೌಡರ್-

ಬದುಕು ಮತ್ತು ಕಲಾಕೃತಿಗಳು, ಡಾ. ಪ್ರೇಮಾನಂದ ಟಿ. ಲಕ್ಕಣ್ಣನವರ ಅವರ ಕರ್ನಾಟಕದ ದೃಶ್ಯಕಲಾ ಸಾಹಿತ್ಯ- ಒಂದು ವೈಚಾರಿಕ ಅಧ್ಯಯನ, ಡಾ. ಜಿ. ಲಕ್ಷ್ಮೀಪತಿ ಅವರ ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ, ಡಾ. ಮಂಟಗಿ ಅವರ ಧನಂಜಯ ಶಿಲ್ಪಿಯವರ ಜೀವನ ಮತ್ತು ಕಲೆ - ಒಂದು ಅಧ್ಯಯನ, ಡಾ. ರೆಹಮಾನ್ ಪಟೇಲ್ ಅವರ ಕರ್ನಾಟಕದ ಬಿದರಿ ಕಲೆ-ಒಂದು ಅಧ್ಯಯನ (ವಿಶೇಷವಾಗಿ ಬೀದರ್ ಜಿಲ್ಲೆಯನ್ನು ಅನುಲಕ್ಷಿಸಿ), 2010ರಲ್ಲಿ ಡಾ. ಸುನಿತಾ ಪಾಟೀಲ ಅವರ ವಿಜಯ ಸಿಂಧೂರ ಅವರ ಕಲಾಕೃತಿಗಳ ಒಳನೋಟಗಳು, ಡಾ. ನಿಂಗಪ್ಪ ಎಂ. ಅಂಗಡಿಯವರ ಗಾಜಿನ ಮೇಲಿನ ಚಿತ್ರಗಳು - ಒಂದು ಅಧ್ಯಯನ, ಡಾ. ಕಿಶೋರ್ ಎನ್. ದಾಟನಾಳ ಅವರ ಕಲಾವಿದ ಶಂಕರ ಪಾಟೀಲರ ಜೀವನ ಮತ್ತು ಕಲಾಕೃತಿಗಳು-ಒಂದು ಅಧ್ಯಯನ, ಡಾ. ಚರಿತಾ ಅವರ ಕರ್ನಾಟಕದ ಚಿತ್ರಕಲಾ ಪರಂಪರೆಯಲ್ಲಿ ಮೈಸೂರು ಸಾಂಪ್ರದಾಯಿಕ ಕಲಾವಿದರ ಪಾತ್ರ - ಒಂದು ಅಧ್ಯಯನ, 2011ರಲ್ಲಿ ಡಾ. ಕಾಶಿನಾಥ ಡಿ. ವಡ್ಡರ ಅವರ ಶಾಂತಿನಿಕೇತನದ ಭಿತ್ತಿಚಿತ್ರಗಳು, ಡಾ. ಸತೀಶಕುಮಾರ ವಲ್ಲ್ಯೇಪೂರೆ ಅವರ ಜೆ. ಜೆ. ಕಲಾಶಾಲೆಯ ಪ್ರಾತಿನಿಧಿಕ ಕಲಾವಿದರು, ಡಾ. ಶಂಕ್ರಪ್ಪ ಎಂ. ಕುಂದಗೋಳ ಅವರ ಕರ್ನಾಟಕದ ಗಂಜೀಫಾ ಚಿತ್ರಕಲೆ, 2012ರಲ್ಲಿ ಡಾ. ಭಾರತಿ ಮರವಂತಿ ಅವರ ಕರಾವಳಿ ಕರ್ನಾಟಕದ ರಂಗೋಲಿ ಚಿತ್ರಕಲೆ, ಡಾ. ಕಾಮಾಕ್ಷಿ ಸಿ. ಸೊಪ್ಪಣ ಅವರ ಕರ್ನಾಟಕದ ಬಟ್ಟೆ ಮಾಧ್ಯಮದ ಚಿತ್ರಕಲೆ, ಡಾ. ಪರಶುರಾಮ ಪಿ. ಅವರ ಕರ್ನಾಟಕದ ಕಲಾಗ್ಯಾಲರಿಗಳು ಒಂದು ವಿಶ್ಲೇಷಣಾತ್ಮಕ ಅಧ್ಯಯನ, ಡಾ. ಶಾಹಿದ್ ಪಾಷಾ ಅವರ ಕಲಾವಿದ ಎ. ಎ. ಆಲಮೇಲಕರ ಬದುಕು ಮತ್ತು ಕಲಾಕೃತಿಗಳು ಹಾಗೂ ಡಾ. ಡಿ. ಎ. ಉಪಾಧ್ಯ ಅವರ ಲಲಿತಕಲೆಗಳ ತೌಲನಿಕ ಅಧ್ಯಯನ, ಡಾ. ಶ್ರೀಧರಮೂರ್ತಿಯವರ ಕರ್ನಾಟಕದ ದೇವಾಲಯಗಳಲ್ಲಿ ದೇವಾಂಗನಾ ಮತ್ತು ಮಿಥುನ ಶಿಲ್ಪಗಳ ಅಧ್ಯಯನ, ಡಾ. ಸುಭಾಸ ಕಮ್ಮಾರ ಅವರ ಬಾದಾಮಿ ಚಾಲುಕ್ಯರ ಶಾಸನಗಳು, ಶಿಲ್ಪಗಳು, ಶಿಲ್ಪಿಗಳು. 2013ರಲ್ಲಿ ಡಾ. ಬಿ. ಎಲ್ ಲಮಾಣಿ ಅವರ ಚಿತ್ರಕಲಾ ಕ್ಷೇತ್ರಕ್ಕೆ ಗದಗ ಜಿಲ್ಲೆಯ ಕೊಡುಗೆ, ಡಾ. ರೇಣುಕಾ ಮಾರ್ಕಂಡೆಯವರ ಕರ್ನಾಟಕದ ವೈಷ್ಣವಪರಂಪರೆಯ ಚಿತ್ರಕಲೆ, ಡಾ. ಶಶಿಕಲಾ ನಂದನಗೌಡ ಅವರ ಕರ್ನಾಟಕದ ಹುದುಗು ಕಲೆ, ಡಾ. ಕೃಷ್ಣೇಗೌಡ ಹೆಚ್. ಎನ್ ಅವರ ಕರ್ನಾಟಕದ ಬೌದ್ಧ ಚಿತ್ರಕಲೆ, ಡಾ. ಬಿ. ಎಂ. ಪಾಟೀಲ ಅವರ ಕರ್ನಾಟಕದ ವೀರಶೈವಪರಂಪರೆಯ ಚಿತ್ರಕಲೆ, ಡಾ. ಕೃಷ್ಣವೇಣಿ ಅವರ ಬಳ್ಳಾರಿ ಜಿಲ್ಲೆಯ ಚಿತ್ರಕಲೆ, ಡಾ. ರವಿ ವಸಾರಾಮ ನಾಯಕ ಅವರ ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು, ಡಾ. ಮಹಾಂತೇಶ ಎಂ. ಪಲದಿನ್ನಿ ಅವರ ಬಾದಾಮಿ ಚಾಲುಕ್ಯರ ಕಾಲದ ಶಿಲ್ಪಗಳು, ಡಾ. ಪಿ.ಬಿ.ಗವಾನಿ ಅವರ ಕರ್ನಾಟಕದ ವಸ್ತುಸಂಗ್ರಹಾಲಯಗಳಲ್ಲಿನ ಚಿತ್ರಕಲೆ, ಡಾ. ಸುಚಿತ್ರಾ ಜಿ. ಲಿಂಗದಳ್ಳಿ ಅವರ ಕಲಾವಿದ ವಿ.ಟಿ.ಕಾಳೆ ಅವರ ಬದುಕು ಮತ್ತು ಕಲಾಕೃತಿಗಳು, ಡಾ. ಬಸಯ್ಯ ಗವಿಮಠ ಅವರ ಬಾಗಲಕೋಟ ಜಿಲ್ಲೆಯ ಚಿತ್ರಕಲೆ, ಡಾ. ಸುಬ್ಬಯ್ಯ ಮಹಾದೇವಯ್ಯ ನೀಲಾ ಅವರ ಶರಣಬಸವೇಶ್ವರರ ಕುರಿತು ರಚಿಸಿದ ವರ್ಣಚಿತ್ರಗಳು - ಒಂದು ಅಧ್ಯಯನ, 2014ರಲ್ಲಿ ಡಾ. ಜ್ಯೋತಿ ಎಸ್. ವೈದ್ಯ ಅವರ ಉತ್ತರಕನ್ನಡ ಜಿಲ್ಲೆಯ ಚಿತ್ರಕಲೆ, ಡಾ. ಎಸ್.ಎಸ್. ಗಡ್ಡಿಯವರ ಚಿತ್ರಕಲಾವಿದ ಎಂ. ಬಿ. ಪಾಟೀಲ ಜೀವನ ಮತ್ತು ಕಲಾಕೃತಿಗಳು, ಡಾ. ವಿಜಯಲಕ್ಷ್ಮೀ ಗೇಟಿಯವರು ಅವರ ರಂಗೋಲಿ ಮತ್ತು ಹಸೆ ಕಲೆಗಳ ತೌಲನಿಕ ಅಧ್ಯಯನ, 2015ರಲ್ಲಿ ಡಾ. ಜಿ. ಪರಂಶಿವಯ್ಯ ಅವರ ಫೋಕ್ ಪೇಂಟಿಂಗ್ಸ್ ಆಫ್

ಆಂಧ್ರಪ್ರದೇಶ ಇವು ದೃಶ್ಯಕಲೆಗಳ ಕುರಿತು ಬಂದ ಪಿಎಚ್.ಡಿ. ಮಹಾಪ್ರಬಂಧಗಳಾಗಿವೆ. ಅನೇಕ ಜನ ವಿದ್ಯಾರ್ಥಿಗಳು ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಈಗ ದೃಶ್ಯಕಲಾ ಕ್ಷೇತ್ರದಲ್ಲಿ ಸಂಶೋಧನಾಧ್ಯಯನ ಕೈಗೊಂಡಿದ್ದಾರೆ.

### 1.1.4. ಡಿ.ಲಿಟ್. ಮಹಾಪ್ರಬಂಧಗಳು

ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದಲ್ಲಿ ಮೊದಲಬಾರಿಗೆ ದೃಶ್ಯಕಲೆಗಳಿಗೆ ಸಂಬಂಧಿಸಿದಂತೆ ಡಿ.ಲಿಟ್. ಸಂಶೋಧನಾ ಅಧ್ಯಯನಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದು, ಈ ಹಿನ್ನೆಲೆಯಲ್ಲಿ ಹೊರಬಂದ ಡಿ.ಲಿಟ್. ಪ್ರಬಂಧಗಳು ಹೀಗಿವೆ. 1999ರಲ್ಲಿ ಡಾ. ಶೀಲಾಕಾಂತ ಪತ್ತಾರ ಅವರ ಬಾದಾಮಿ : ಒಂದು ಸಾಂಸ್ಕೃತಿಕ ಅಧ್ಯಯನ, ಡಾ. ಜಿ. ಜ್ಞಾನಾನಂದ ಅವರ ಕನ್ನಡ ಮಹಾಭಾರತಗಳಲ್ಲಿ ಶಿಲ್ಪ ಮತ್ತು ಶಿಲ್ಪಿಗಳು, 2001ರಲ್ಲಿ ಡಾ. ದೇವದಾಸ ಕಳಸದ ಇವರ ಉತ್ತರ ಕರ್ನಾಟಕದ ರಂಗಭೂಮಿ, ರಂಗಸಜ್ಜಿಕೆ ಮತ್ತು ಪ್ರಸಾಧನ ಕಲೆ, 2005ರಲ್ಲಿ ಡಾ. ಆನಂದ ಪೂಜಾರರ ಕರಾವಳಿ ಪ್ರದೇಶದ ಕಾವಿ ಚಿತ್ರಕಲೆ, ಡಾ. ಡಿ.ಎ. ಉಪಾಧ್ಯ ಅವರ ವಾಸ್ತು-ಶಿಲ್ಪ-ಚಿತ್ರಕಲೆಯ ಹಿನ್ನೆಲೆಯಲ್ಲಿ ದೃಶ್ಯಕಲೆಗಳ ತೌಲನಿಕ ಅಧ್ಯಯನ, 2010ರಲ್ಲಿ ಡಾ. ಎಂ.ಎಸ್. ಮೂರ್ತಿ ಅವರ ಮಕ್ಕಳ ಮನಸ್ಸಿನ ಚಿತ್ರಗಳು, 2013ರಲ್ಲಿ ಡಾ. ಜಿ.ಎಸ್. ಭೂಸಗೊಂಡ ಅವರ ಚಿತ್ರಕಲಾವಿದ ಚಂದ್ರವರ್ಮ ಬಿ. ಆರ್. ಕೋಟ್ಯಾಳಕರ-ಒಂದು ಅಧ್ಯಯನ, ಹೀಗೆ ಹಲವು ಡಿ.ಲಿಟ್ ಮಹಾಪ್ರಬಂಧಗಳು ಹೊರಬಂದಿವೆ. ಈ ಡಿ.ಲಿಟ್. ಅಧ್ಯಯನಕ್ಕೆ ಯಾವುದೇ ರೀತಿಯ ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿಗಳ ಅವಶ್ಯಕತೆ ಇರುವುದಿಲ್ಲ. ಆಯಾ ಕ್ಷೇತ್ರದಲ್ಲಿ ಅಧ್ಯಯನ ಮಾಡುವವರ ತಜ್ಞತೆಯನ್ನೇ ಮುಖ್ಯವಾಗಿ ಪರಿಗಣಿಸಿ, ಕನ್ನಡ ವಿಶ್ವವಿದ್ಯಾಲಯವು ತಜ್ಞರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಇಂತಹ ಅಧ್ಯಯನಕ್ಕೆ ಅವಕಾಶವನ್ನು ನೀಡುತ್ತಾ ಬಂದಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಮಾತ್ರ ಇಂತಹ ಡಿ.ಲಿಟ್. ಸಂಶೋಧನ ಅಧ್ಯಯನಕ್ಕೆ ಅವಕಾಶವಿರುವುದು ಗಮನಾರ್ಹ ಅಂಶವಾಗಿದೆ.

ಒಟ್ಟಾರೆ ಕರ್ನಾಟಕದಲ್ಲಿ ಇಲ್ಲಿಯವರೆಗೆ ನಮಗೆ ದೊರೆತ ಮಾಹಿತಿಯಂತೆ ಸುಮಾರು 66 ಪಿ.ಎಚ್.ಡಿ ಮತ್ತು 7 ಡಿ.ಲಿಟ್ ಮಹಾಪ್ರಬಂಧಗಳು ಹಾಗೂ 64 ಎಂ.ಫಿಲ್ ಸಂಪ್ರಬಂಧಗಳು ವಿಶ್ವವಿದ್ಯಾಲಯದಲ್ಲಿ ಸಲ್ಲಿಕೆಯಾಗಿವೆ.

## 1.2. ಪದವಿಯೇತರ ಅನುದಾನ / ಅನುದಾನ ರಹಿತ ಸಂಶೋಧನಾ ಅಧ್ಯಯನಗಳು

ಈ ಮೇಲಿನ ಅಂಶಗಳು ವಿಶ್ವವಿದ್ಯಾಲಯದ ವಿವಿಧ ಹಂತದ ಪದವಿಗಳಿಗಾಗಿ ನಡೆಸಿದ ಕಿರುಸಂಶೋಧನಾ, ಸಂಶೋಧನಾ ಅಧ್ಯಯನಗಳಾದರೆ, ಇವು ಯಾವುದೇ ಪದವಿಗಳಿಗಾಗಿ ನಡೆಯದೇ ಸ್ವತಂತ್ರವಾದ ಆಸಕ್ತಿಯಿಂದ ಇನ್ನೂ ಕೆಲವು ಸಲ ಸರ್ಕಾರ ಮತ್ತು ಬೇರೆ ಬೇರೆ ಸಂಘ, ಸಂಸ್ಥೆಗಳ ಧನಸಹಾಯೋಗದೊಂದಿಗೆ ನಡೆದ ಅಧ್ಯಯನಗಳು, ಯು.ಜಿ.ಸಿ.ಯ ಮೇಜರ್ ಮತ್ತು ಮೈನರ್ ಸಂಶೋಧನಾ ಯೋಜನೆಗಳು ವಿಶ್ವವಿದ್ಯಾಲಯ ಮತ್ತು ಮಹಾವಿದ್ಯಾಲಯಗಳಲ್ಲಿಯೂ ಸಾಕಷ್ಟು ಪ್ರಮಾಣದಲ್ಲಿ ನಡೆಯುತ್ತಿರುವುದು ಗಮನಾರ್ಹವಾದ ಅಂಶವಾಗಿದೆ. ಅವುಗಳ ಕುರಿತಾಗಿಯೇ ವಿಶೇಷವಾಗಿ ದಾಖಲಿಸಬೇಕಾದ ಅವಶ್ಯಕತೆಯಿದೆ.

## 2. ಸಂಶೋಧನೆ ನಡೆಯಬೇಕಾದ ಕೆಲವು ಪ್ರಮುಖ ಆಧ್ಯತೆಯ ಕ್ಷೇತ್ರಗಳು

ದೃಶ್ಯಕಲಾ ಕ್ಷೇತ್ರದಲ್ಲಿ ಬಹುಪಾಲು ಅಧ್ಯಯನಗಳು ಈಗ ನಡೆದಿದ್ದು, ಚಿತ್ರಕಲೆ ಮತ್ತು ಶಿಲ್ಪಕಲೆ, ಒಂದೆರಡು ಅಧ್ಯಯನಗಳು ಆನ್ವಯಿಕ ಕಲೆಯ ಕುರಿತು ನಡೆದಿರುವುದು ಕಂಡುಬರುತ್ತದೆ. ದೃಶ್ಯಕಲೆಯಲ್ಲಿ ಚಿತ್ರ, ಶಿಲ್ಪ, ವಾಸ್ತುಶಿಲ್ಪ, ಛಾಯಾಚಿತ್ರ, ಆನ್ವಯಿಕ ಕಲೆ, ಮುದ್ರಣಕಲೆ ಮುಂತಾದ ವಿಷಯಗಳ ಕುರಿತು ಇನ್ನೂ ವ್ಯಾಪಕವಾಗಿ ಅಧ್ಯಯನಗಳಾಗುವ ಅವಶ್ಯಕತೆಯಿದೆ. ದೃಶ್ಯಕಲಾ ಕ್ಷೇತ್ರವು ಅಧ್ಯಯನಕಾರರಿಗೆ ಒಂದು ಕನ್ಯೆನೆಲವಾಗಿದೆ. ಇಲ್ಲಿ ಸಾಕಷ್ಟು ಅಧ್ಯಯನಕ್ಕೆ ಅವಕಾಶಗಳಿವೆ. ಸ್ಥೂಲವಾಗಿ ಕೆಲವು ಆಧ್ಯತೆಯ ಕ್ಷೇತ್ರಗಳನ್ನು ಇಲ್ಲಿ ಹೆಸರಿಸಲಾಗಿದೆ.

ಬುಡಕಟ್ಟು ಜನಾಂಗಗಳ ದೃಶ್ಯಕಲೆಯ ಕುರಿತಾದ ಅಧ್ಯಯನಗಳು, ಜಾನಪದರ ದೃಶ್ಯಕಲೆಯ ಕುರಿತಾದ ಅಧ್ಯಯನಗಳು, ಹಸ್ತಪ್ರತಿಯ ಚಿತ್ರಗಳ ಕುರಿತು, ಕನ್ನಡ ಸಾಹಿತ್ಯದಲ್ಲಿ ಚಿತ್ರಕಲೆಯ ವಿವರಗಳ ಕುರಿತು, ಶಾಸನ ಶಿಲ್ಪಗಳ ಕುರಿತು, ಸಂಸ್ಕೃತ ಸಾಹಿತ್ಯದಲ್ಲಿ ಬಂದ ಚಿತ್ರಕಲೆಯ ಅಧ್ಯಯನ, ಮುಸ್ಲಿಂ ಸಾಹಿತ್ಯ ಕೃತಿಗಳಲ್ಲಿಯ ಚಿತ್ರಕಲೆ ಕುರಿತು, ದೃಶ್ಯಕಲೆಗಳು ಮತ್ತು ಅನ್ಯಶಿಸ್ತುಗಳ ಅಂತರಶಿಸ್ತೀಯ ಅಧ್ಯಯನಗಳು, ಭಿತ್ತಿಚಿತ್ರಗಳ ಸೂಕ್ಷ್ಮ ಅಧ್ಯಯನಗಳು, ಕರ್ನಾಟಕ ಮತ್ತು ಕರ್ನಾಟಕೇತರ ದೃಶ್ಯಕಲೆಗಳ ತೌಲನಿಕ ಅಧ್ಯಯನ, ಸಮಕಾಲೀನ ಸಂದರ್ಭದ ದೃಶ್ಯಕಲೆಗಳು ಮತ್ತು ಕಲಾವಿದರುಗಳ ಅಧ್ಯಯನ, ದೃಶ್ಯಕಲೆಗಳ ಜಿಲ್ಲಾವಾರು, ಪ್ರದೇಶವಾರುಗಳ ಸೂಕ್ಷ್ಮ ಅಧ್ಯಯನಗಳು, ಕರ್ನಾಟಕದ ವಿವಿಧ ಅರಸುಮನೆತನಗಳಲ್ಲಿ ಬೆಳೆದು ಬಂದ ದೃಶ್ಯಕಲೆಗಳ ಅಧ್ಯಯನ, ಕರ್ನಾಟಕೇತರ ಪ್ರದೇಶಗಳ ವಿವಿಧ ರಾಜ್ಯ ಮತ್ತು ಪಾಶ್ಚಿಮಾತ್ಯ ದೇಶಗಳಲ್ಲಿ ಸಂಗ್ರಹಗೊಂಡ ಚಿತ್ರಾಂಕಿತ ಹಸ್ತಪ್ರತಿಗಳ ಅಧ್ಯಯನ, ಬ್ರಿಟೀಷಾಡಳಿತದ ಕಂಪನಿ ಚಿತ್ರಗಳ ಕುರಿತಾದ ಅಧ್ಯಯನಗಳು, ದಖ್ಖನಿ ಚಿತ್ರಕಲೆಯ ವಿವಿಧ ನೆಲೆಗಳ ಕುರಿತಾದ ಅಧ್ಯಯನಗಳು, ಕರಕುಶಲ ಕಲೆಗಳ ಮತ್ತು ಪ್ರವಾಸೋದ್ಯಮದ ವಿಭಿನ್ನ ಆಯಾಮಗಳ ಕುರಿತಾದ ಅಧ್ಯಯನಗಳು, ಸಮಕಾಲೀನ ದೃಶ್ಯಕಲಾವಿಮರ್ಶೆ ಮತ್ತು ದೃಶ್ಯಕಲಾಸಾಹಿತ್ಯದ ಕುರಿತು ಅಧ್ಯಯನಗಳು, ಸಮಕಾಲೀನ ಕಲಾಪ್ರದರ್ಶನ, ಮಾರುಕಟ್ಟೆ ಸಮಸ್ಯೆಗಳ ಕುರಿತು ಅಧ್ಯಯನಗಳು, ದೃಶ್ಯಕಲಾಶಿಕ್ಷಣದ ವಿವಿಧ ಹಂತಗಳ ಶಿಕ್ಷಣ ಮತ್ತು ಪಠ್ಯದ ಸಾಧಕ-ಬಾಧಕಗಳ ಕುರಿತು, ಮಕ್ಕಳ ಕಲೆಗಳ ಕುರಿತು, ದೃಶ್ಯಕಲಾಶಿಕ್ಷಣದ ಉದ್ಯೋಗಾವಕಾಶಗಳು ಮತ್ತು ಸಮಕಾಲೀನ ಸಮಸ್ಯೆಗಳ ಕುರಿತು, ದೃಶ್ಯಕಲಾ ಶಿಕ್ಷಣದ ಶಿಕ್ಷಕರ ಸಮಸ್ಯೆಗಳ ಕುರಿತು, ಯು.ಜಿ.ಸಿ. ಏಕರೂಪ ಪಠ್ಯಕ್ರಮ ಮತ್ತು ಪ್ರಾದೇಶಿಕ ನೆಲೆಯ ಪಠ್ಯಕ್ರಮಗಳ ಕುರಿತಾದ ಅಧ್ಯಯನಗಳು, ಆನ್ವಯಿಕ ಕಲೆಯ ವಿವಿಧ ವಿಷಯಗಳ ಕುರಿತಾದ ಅಧ್ಯಯನ, ಮುದ್ರಣ ಕಲೆಯ ವಿವಿಧ ವಿಷಯಗಳ ಕುರಿತಾದ ಅಧ್ಯಯನ, ವಾಸ್ತುಶಿಲ್ಪದ ಕುರಿತ ವಿವಿಧ ಅಧ್ಯಯನಗಳು, ಛಾಯಾಚಿತ್ರ ಕಲೆಯ ವಿವಿಧ ವಿಷಯಗಳ ಕುರಿತಾದ ಮತ್ತು ತೌಲನಿಕ ಅಧ್ಯಯನ ಮುಂತಾದವುಗಳು.

ಹೀಗೆ ಅಧ್ಯಯನದ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಅಧ್ಯಯನ ಮಾಡುವವರ ಮತ್ತು ಮಾರ್ಗದರ್ಶಕರ ಹಿನ್ನೆಲೆಯಲ್ಲಿ ಅಧ್ಯಯನಗಳು ಅಲಕ್ಷಿತವಾದ ಕ್ಷೇತ್ರದಲ್ಲಿ ನಡೆಯುತ್ತಿರುವುದು ಕಂಡುಬರುತ್ತದೆ. ಈ ದಿಸೆಯಲ್ಲಿ ಮುಂಬರುವ ದಿನಗಳಲ್ಲಿ ಉತ್ತಮವಾದ ಬೆಳೆ ಈ ಕ್ಷೇತ್ರದಲ್ಲಿ ಬರುವ

ಎಲ್ಲ ಮುನ್ಸೂಚನೆಗಳು ಕಾಣುತ್ತಲಿವೆ ಮತ್ತು ದೃಶ್ಯಕಲಾ ಕ್ಷೇತ್ರವು ಇನ್ನುಳಿದ ಬೇರೆ ಬೇರೆ ಕ್ಷೇತ್ರಗಳಂತೆ ಸಮೃದ್ಧವಾಗಿ ತನ್ನ ಬೆಳವಣಿಗೆಯ ದಿಕ್ಕು-ದೆಸೆಗಳನ್ನು ಗುರುತಿಸಿಕೊಳ್ಳುವ ಸಾಧ್ಯತೆಗಳಿವೆ.

## ಆಕರ ಗ್ರಂಥಗಳು

೧. ಪ್ರೊ. ಎಸ್. ಸಿ. ಪಾಟೀಲ : ಕಲ್ಯಾಣಕರ್ನಾಟಕದ ಚಿತ್ರಕಲಾಪಥ ಪ್ರ: ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ, ಧಾರವಾಡ. ೨೦೧೫



# ಲಲಿತಕಲೆ; ತೌಲನಿಕ ಚಿಂತನೆ

♦ ಡಾ॥ ಡಿ.ಎ. ಉಪಾಧ್ಯ

**ಭಾ**ರತೀಯರಲ್ಲಿ ಲಲಿತ ಎಂಬ ಪದವು ಕ್ರಿ.ಶ. ಒಂದನೇ ಶತಮಾನದ 'ಲಲಿತವಿಸ್ತರ' ಎಂಬ ಗ್ರಂಥದಲ್ಲಿಯೇ ದೊರೆಯುತ್ತದೆ. ಈ ಗ್ರಂಥದಲ್ಲಿ ಕಲೆಗಳ ಪಟ್ಟಿಯನ್ನು ಮಾಡಲಾಗಿದೆ ಎಂದು ಹೇಳಲಾಗುತ್ತಿದೆ. ಆದರೆ ಈ ಗ್ರಂಥದಲ್ಲಿಯೂ ಸಹ 64 ಕಲೆಗಳ ಪಟ್ಟಿ ಮಾಡಲಾಗಿದೆಯೇ ವಿನಃ ಕೇವಲ ಏಳೇ ಲಲಿತಕಲೆಗಳೆಂದು ಹೇಳಲಿಲ್ಲ. ಲಲಿತ ಎಂದ ಏನು? ಎಂಬ ಬಗೆಗೆ, ಭರತಮುನಿ, ಧನಂಜಯ ಹಾಗೂ ವಿಶ್ವನಾಥರು ಹೇಳಿದ್ದಾರೆ. ಭರತನನ್ನೇ ಅನುಸರಿಸಿದ ಧನಂಜಯನು ಹೀಗೆ ಹೇಳಿದ್ದಾನೆ. "ಶೃಂಗಾರವನ್ನು ಉಂಟು ಮಾಡುವಂತಹ, ಸ್ವಾಭಾವಿಕವೂ ಮೃದುವೂ ಆದ ಚೇಷ್ಟೆಯೇ ಲಲಿತ" ಎಂದು ಹೇಳಿದ್ದಾನೆ. ಅಂದರೆ ಇಲ್ಲಿ ಲಲಿತ ಎಂದರೆ ಮೃದು, ಶೃಂಗಾರ, ಸ್ವಾಭಾವಿಕ ಎಂದು ತಿಳಿಯಬಹುದಾಗಿದೆ.

ಲಲಿತಕಲೆಗಳ ಪಟ್ಟಿಯು ವಾತ್ಸಾಯನ ಮುನಿಯ ಕಾಮಸೂತ್ರದಲ್ಲಿಯೇ ದೊರೆಯುತ್ತದೆ. ಅವನು 64 ಕಲೆಗಳಲ್ಲಿ ಸಂಗೀತ, ನೃತ್ಯ, ಚಿತ್ರಕಲೆ ಇತ್ಯಾದಿ ಲಲಿತಕಲೆಗಳನ್ನು ತನ್ನ ಪಟ್ಟಿಯಲ್ಲಿ ಪ್ರಥಮ ಪ್ರಾಶಸ್ತ್ಯದೊಂದಿಗೆ ದಾಖಲಿಸಿದ್ದಾನೆ. ಆದರೆ ವಾತ್ಸಾಯನನು ಎಲ್ಲಿಯೂ ಲಲಿತ ಪದ ಬಳಸದೇ ಇರುವುದು ಗಮನಾರ್ಹ ಸಂಗತಿಯಾಗಿದೆ. ಇವನ ಕಾಲದಲ್ಲಿ ಲಲಿತಕಲೆಗಳನ್ನು ಪ್ರತ್ಯೇಕವಾಗಿ ವರ್ಗೀಕರಿಸದಿರುವುದು ಗೋಚರಿಸುತ್ತದೆ.

ಲಲಿತಕಲೆಗಳ ಉಲ್ಲೇಖ ಕಾಳಿದಾಸನ 'ರಘುವಂಶ' ಮಹಾಕಾವ್ಯದಲ್ಲಿ ದೊರೆಯುತ್ತವೆ. ಅಜನು ತನ್ನ ಹೆಂಡತಿ ಇಂದುಮತಿಯ ಶವಸಂಸ್ಕಾರದ ಸಂದರ್ಭದಲ್ಲಿ ಹೀಗೆ ಹೇಳಿದ್ದಾನೆ. "ಗೃಹಿಣೀ ಸಚಿವಃ ಸಖೀ ಮಿಥಃ ಪ್ರಿಯ ಶಿಷ್ಯಾ ಲಲಿತೇ ಕಲಾವಿಧೌ" ಅಂದರೆ ನೀನು ನನ್ನ ಗೃಹಿಣಿ, ಮಂತ್ರಿ, ಗೆಳತಿ, ಲಲಿತಕಲೆಗಳಲ್ಲಿ ನನ್ನ ಶಿಷ್ಯೆ ಎಂಬ ಮಾತು ಬರುತ್ತದೆ. ಇದರಿಂದ ಕ್ರಿ.ಪೂ. ಒಂದನೇ ಶತಮಾನದಲ್ಲಿಯೇ ಲಲಿತಕಲೆಗಳು ಭಾರತದಲ್ಲಿ ಗುರುತಿಸಲ್ಪಟ್ಟಿರುವುದು ಸ್ಪಷ್ಟವಾಗುತ್ತದೆ. ಕಾಳಿದಾಸನ ಕಾಲ ಕ್ರಿ.ಪೂ. ಒಂದನೇ ಶತಮಾನವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

**ಲಲಿತದ ಸ್ವರೂಪ** : ಲಲಿತ ಎಂಬ ನಮ್ಮ ಶಬ್ದ ವಿಶಾಲ ವ್ಯಾಪ್ತಿಯನ್ನು ಹೊಂದಿದ ಪದ. ಗ್ರೀಕ್ ಕಲಾರಂಗದಲ್ಲಿ ಅರಿಸ್ಟಾಟಲ್‌ನಂತಹ ಮಹಾ ಮೀಮಾಂಸಕನೂ ಲಲಿತ ಪದದ ಪರ್ಯಾಯ ಅರ್ಥವನ್ನು ಬೇರೆ ತೆರೆನಾಗಿಯೇ ಉಲ್ಲೇಖಿಸಿದ್ದಾನೆ. ಲಲಿತ ಎಂದರೆ ಅನುಕರಣೆ ಎಂಬ ಅರ್ಥದಲ್ಲಿ ಅರಿಸ್ಟಾಟಲ್ ಉಲ್ಲೇಖಿಸಿದ್ದಾನೆ. 'ಲಲಿತಕಲೆ' ಎನ್ನುವ ವಾಕ್ಯ ಖಂಡದಲ್ಲಿ ನಮ್ಮ ಶಬ್ದಕ್ಕಿರುವ ಅರ್ಥ ಪರಿಮಿತಿಯು 'ಕಲೆ' ಎಂಬುದರ ಗ್ರೀಕ್ ಶಬ್ದಕ್ಕೆ ಎಂದೂ ಅರ್ಥ ಉಂಟಾಗಿಲ್ಲ. ಲಲಿತ ಎನ್ನುವ ನಮ್ಮ ಪದಕ್ಕೆ ನಾವು ಮೂಲ. ಅಭಿವ್ಯಕ್ತಿಯ ಒಂದು ಬಗೆ ಎಂಬ ಕಲ್ಪನೆಯನ್ನು ಹೊಂದಿದ್ದೇವೆ. ಆದರೆ ಗ್ರೀಕರು ಇದನ್ನು ಅನುಕರಣೆ ಎಂಬ ಕಲ್ಪನೆ ಹೊಂದಿದ್ದಾರೆ. ಆದರೆ ನಾವು ಅನುಕರಣೆ ಮಾಡಲಾಗದ್ದಕ್ಕೆ ಮಾತ್ರ ಲಲಿತಕಲೆ ಎನ್ನುತ್ತೇವೆ. ಭಾರತೀಯರ ಪ್ರಕಾರ ಲಲಿತ ಎಂದರೆ ಸೃಜನ ಶೀಲವಾದದ್ದು, ಸರಳವಾದದ್ದು, ಲಾಲಿತ್ಯಮಯವಾದದ್ದು, ಸುಂದರವಾದದ್ದು, ಕೋಮಲವಾದದ್ದು, ಮೃದುವಾದದ್ದು, ಲಕ್ಷಣವಾದದ್ದು, ಮನೋಹರವಾದದ್ದು, ನಕಲು ಮಾಡಲಾಗದ್ದು ಮತ್ತು ಅನುವಾದ ಮಾಡಲಾಗದ್ದು ಮಾತಿನಲ್ಲಿ ಹೇಳಲಾಗದ್ದು, ರಸೋತ್ಪತ್ತಿ ಉಂಟುಮಾಡುವಂತಹದ್ದು ಮಾಧ್ಯಮದ ಮೂಲಕ ಭಾವೋತ್ಪತ್ತಿ ಉಂಟುಮಾಡುವಂಥದ್ದು ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತೇವೆ.

**ಕ್ರಿಯೆ** : ಯಾವ ಕಲೆಯ ರಚನಾಕ್ರಿಯೆ ಅಥವಾ ಅದರ ಅಭಿವ್ಯಕ್ತಿಯ ಕಾರ್ಯ ಸಂಪೂರ್ಣವಾಗಿ ಮುಗಿದ ಮೇಲೆ, ನಾವು ಆ ಕಲಾಪ್ರಕಾರದ ಆನಂದವನ್ನು ಪೂರ್ಣ ಪ್ರಮಾಣದಲ್ಲಿ ಆಸ್ವಾದಿಸಲು

---

ಪ್ರದರ್ಶನ ಕಲೆಗಳಲ್ಲಿ ಸಹೃದಯ ಚಪ್ಪಾಳೆ, ಸಿಳ್ಳೆ, ಕೇಕೆ, ವ್ಹಾ, ವಾರೆವ್ಹಾ, ಭೇಷ್, ಶಹಬ್ಬಾಷ್ ಎಂಬ ಉದ್ಗಾರಗಳು, ಕಲಾವಿದರಿಗೆ ಉತ್ಸಾಹ, ಉತ್ತೇಜನಗಳನ್ನು ತರುತ್ತವೆ. ಹೀಗಿದ್ದಾಗ ಈ ಕಲೆಗಳ ಅಭಿವ್ಯಕ್ತಿಗಳು ಇನ್ನೂ ಶ್ರೇಷ್ಠವಾಗಿ ಸಾಗುತ್ತವೆ. ಒಂದು ಪಕ್ಷ ಸಹೃದಯರು ಪ್ರದರ್ಶನದ ನಡುವೆ ಆಗಾಗ ಎದ್ದು ಎದ್ದು ಹೋದರೆ ಅಥವಾ ಒಬ್ಬರಿಗೊಬ್ಬರು ಮಾತನಾಡುತ್ತಾ ಕೂತರೆ, ಇಲ್ಲವೇ ಛೀ. ಥೂ ಎಂದು ಉದ್ಗಾರ ತೆಗೆದರೆ, ಇವು ಕಲಾವಿದರಿಗೆ ಬೇಜಾರ, ನಿರುತ್ಸಾಹಗಳನ್ನು ತರುತ್ತವೆ. ಇದರಿಂದ ಕಲೆಯ ಅಭಿವ್ಯಕ್ತಿಯಲ್ಲಿ ಕೆಟ್ಟ ಪರಿಣಾಮ ಉಂಟಾಗಿ ಇಡೀ ಕಲಾಪ್ರದರ್ಶನವೇ ನೀರಸವಾಗುತ್ತಾ ಕೆಳದರ್ಜೆಗಿಳಿಯುತ್ತದೆ. ಆದರೆ ದೃಶ್ಯಕಲೆಗಳಲ್ಲಿ ಇಂಥ ಅಪಾಯವೇ ಇಲ್ಲ. ದೃಶ್ಯಕಲೆಗಳ ಅಭಿವ್ಯಕ್ತಿಯ ಸಂದರ್ಭದಲ್ಲಿ ಪ್ರೇಕ್ಷಕರೇ ಇರುವುದಿಲ್ಲ. ಹಾಗೆಯೇ ದೃಶ್ಯಕಲೆಗಳ ಪ್ರದರ್ಶನದಲ್ಲಿ ದೊರೆಯುವ ಸಹೃದಯರ ಪ್ರತಿಕ್ರಿಯೆಗಳು ಕಲೆಯ ಮೇಲೆ ಅಥವಾ ಕಲಾವಿದನ ಮೇಲೆ ಯಾವುದೇ ಪರಿಣಾಮ ಬೀರುವುದಿಲ್ಲ.

ಸಾಧ್ಯವಾಗುತ್ತದೆಯೋ ಅಂಥ ಕಲೆಗಳಿಗೆ ದೃಶ್ಯಕಲೆ (Ggಊಚಿಟ ಂಡಿಣ) ಎಂದು ಕರೆಯುತ್ತೇವೆ. ಉದಾಹರಣೆಗೆ ಒಬ್ಬ ಕಲಾವಿದ ಒಂದು ಚಿತ್ರವನ್ನು ಬರೆಯುತ್ತಿದ್ದರೆ ಅಥವಾ ಒಂದು ಶಿಲ್ಪವನ್ನು ಕೆತ್ತುತ್ತಿದ್ದರೆ, ಆತನ ಕಲಾ ಸೃಷ್ಟಿಯ ಕಾರ್ಯ ಪೂರ್ಣಗೊಂಡ ನಂತರ ಮಾತ್ರ ಆ ಕಲೆಯ ಭಾವನಾ ಲೋಕದ ಭವ್ಯತೆ, ಕಲ್ಪನಾ ರಮ್ಯತೆ, ಸತ್ವ ಮತ್ತು ಸೌಂದರ್ಯಗಳಲ್ಲಿಯ ತೃಪ್ತಿಯನ್ನು ಅನುಭವಿಸಲು ಅಥವಾ ಆಸ್ವಾದಿಸಲು ಸಾಧ್ಯವಾಗುತ್ತದೆಯೋ ಅಂಥ ಕಲೆಗೆ ದೃಶ್ಯಕಲೆ ಎನ್ನುತ್ತೇವೆ. ಕಲಾವಿದನ ಅಭಿವ್ಯಕ್ತಿ ಕಾಯ ಅಥವಾ ರಚನಾ ಕ್ರಿಯೆ ನಡೆದಿರುವಾಗ ನಾವು ಈ ಕಲೆಗಳ ಸತ್ವ ಸಾಮರ್ಥ್ಯವನ್ನು ಆಸ್ವಾದಿಸಲಾಗಲಿ ಅಥವಾ ಅನುಭವಿಸಲಾಗಲಿ ಸಾಧ್ಯವಾಗುವುದಿಲ್ಲ. ಇಂಥ ಕಲಾ ಪ್ರಕಾರಗಳಿಗೆ ಮಾತ್ರ ದೃಶ್ಯಕಲೆ ಎನ್ನುತ್ತಾರೆ. ಹಾಗೆಯೇ ಯಾವಕಲೆಯ ಅಭಿವ್ಯಕ್ತಿಯ ಕಾರ್ಯ ನಡೆದಿರುವಾಗಲೇ ಅಂಥ ಕಲೆಗಳ ಅನುಭೂತಿಯನ್ನು ಹೊಂದಲು ಸಾಧ್ಯವೋ ಅಂಥ ಕಲೆಗಳಿಗೆ ಪ್ರದರ್ಶನ ಕಲೆ ಎನ್ನುತ್ತೇವೆ.

**ಮಾಧ್ಯಮ** : ದೃಶ್ಯಕಲೆಗಳು ನಿಸರ್ಗದಲ್ಲಿ ದೊರೆಯುವ ಬಣ್ಣ, ಸೀಸ, ಇದ್ದಿಲು, ಶಾಯಿ, ಮಣ್ಣು, ಮರ, ಕಲ್ಲು ಇತ್ಯಾದಿ ಜಡಪದಾರ್ಥಗಳನ್ನು ಮಾಧ್ಯಮಗಳನ್ನಾಗಿ ಹೊಂದಿದಂಥವುಗಳು. ಆದರೆ ಪ್ರದರ್ಶನ ಕಲೆಗಳು ಜೀವಂತ ಮಾಧ್ಯಮವನ್ನು ಹೊಂದಿರುವಂಥವುಗಳು. ಪ್ರದರ್ಶನಕಲೆಗಳು, ಹೊರಗಿನ ಯಾವುದೇ ಜಡವಾದ ವಾಹಕಗಳನ್ನು ಅವಲಂಬಿಸಿಲ್ಲ. ಪ್ರದರ್ಶನಕಲೆಗಳು ಕಲಾವಿದನ ಶರೀರ ಶಾರೀರ ಇತ್ಯಾದಿ ಅವಯವಗಳನ್ನೇ ಮಾಧ್ಯಮವಾಗಿ ಉಳ್ಳಂಥವುಗಳು. ಈ ಕಲೆಗಳಲ್ಲಿ ಕಲಾವಿದ ಮತ್ತು ಮಾಧ್ಯಮ ಎರಡೂ ಸಹ ಒಂದೇ ಆಗಿವೆ. ಅಂದರೆ ಕಲಾವಿದನೇ ಕಲೆಯ ಮಾಧ್ಯಮ ಕೂಡಾ ಆಗಿದ್ದಾನೆ. ಆದರೆ ದೃಶ್ಯಕಲೆಗಳಲ್ಲಿ ಕಲಾವಿದ ಮತ್ತು ಮಾಧ್ಯಮ ಬೇರೆ ಬೇರೆ. ದೃಶ್ಯಕಲೆಗಳಲ್ಲಿ ಮಾಧ್ಯಮವು ಕಲಾವಿದನಿಂದ ಪ್ರತ್ಯೇಕವಾಗಿರುವಂಥದ್ದು.

ದೃಶ್ಯಕಲೆಗಳಲ್ಲಿ ಮಾಧ್ಯಮಗಳು ಕಲಾವಿದನ ಕಲ್ಪನೆಯಂತೆ ಒಂದು ಪಾತಳಿಯಲ್ಲಿ ಪರಸ್ಪರ ಸ್ಥಾನಿಕ (Spaciau) ಸಂಬಂಧವನ್ನು ಹೊಂದಿರುತ್ತವೆ. ಆದರೆ ಆ ಕಾಲದಲ್ಲಿ ಬರುವ ಚಲನೆಯನ್ನು ಪ್ರದರ್ಶನಕಲೆಗಳ ಮಾಧ್ಯಮಗಳಂತೆ ದೃಶ್ಯಕಲೆಗಳ ಮಾಧ್ಯಮಗಳು ಹಿಡಿದಿಡಲಾರವು. ಹಾಗೆಯೇ ಪ್ರದರ್ಶನಕಲೆಗಳ ಮಾಧ್ಯಮಗಳು ಸ್ಥಾನಿಕ ಸಂಬಂಧವನ್ನು ದೃಶ್ಯಕಲೆಗಳಂತೆ ಹಿಡಿದಿಡಲಾರವು. ಪ್ರದರ್ಶನಕಲೆಗಳ ಮಾಧ್ಯಮಗಳಿಗೆ, ದೃಶ್ಯಕಲೆಗಳ ಮಾಧ್ಯಮಗಳಂತೆ ಸ್ವತಂತ್ರ ಅಸ್ತಿತ್ವವಿಲ್ಲ. ಕಲಾವಿದನ ಸಾವಿನ ಜೊತೆಗೆ ಮಾಧ್ಯಮಗಳು ಸಾಯುತ್ತವೆ. ಆದರೆ ದೃಶ್ಯಕಲೆಗಳ ಮಾಧ್ಯಮಗಳು ಕಲಾವಿನ ಜೊತೆಗೆ ಸಾಯುವುದಿಲ್ಲ. ಕಲಾವಿದನ ಕಾಲದ ನಂತರವೂ ಅವು ಕಲಾಕೃತಿಯಲ್ಲಿ ಬದುಕಿರುತ್ತವೆ. ದೃಶ್ಯಕಲೆಗಳ ಮಾಧ್ಯಮಗಳಿಗೆ ಸ್ವತಂತ್ರ ಅಸ್ತಿತ್ವವಿದೆ.

**ಅಭಿವ್ಯಕ್ತಿ** : ಪ್ರದರ್ಶನಕಲೆಗಳಲ್ಲಿ ಕಲಾವಿದನ ಅಭಿವ್ಯಕ್ತಿಯೇ ಕಲೆಯಾಗಿದೆ. ಪ್ರದರ್ಶನಕಲೆಗಳು ಕಲಾವಿದನ ಅಂತರಂಗದಲ್ಲಿ ಕಲೆಯಾಗಿ ಹುಟ್ಟಿ, ಕಲಾವಿದನ ಒಳಗೇ ಕಲೆಯಾಗಿ ಹುದುಗಿರುವಂಥವುಗಳು. ಕಲಾವಿದನ ಸಾವಿನೊಂದಿಗೇ ಈ ಕಲೆಗಳು ಅಂತ್ಯವಾಗುವಂಥವುಗಳು ಆದರೆ ದೃಶ್ಯಕಲೆಗಳು ಹೀಗಲ್ಲ. ಕಲಾವಿದನ ಅಭಿವ್ಯಕ್ತಿ ದಾಖಲಾದ ನಂತರ ಇವುಗಳು ಕಲೆಯಾಗುವಂಥವುಗಳು. ಅಂದರೆ ದೃಶ್ಯಕಲೆಗಳು ಕಲಾವಿದನಿಂದ ಪ್ರತ್ಯೇಕವಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವಂಥವುಗಳು. ಇಲ್ಲಿ ಪ್ರದರ್ಶನಕಲೆಗಳ ಹಾಗೇ, ಕಲಾವಿದನ ಅಭಿವ್ಯಕ್ತಿಯೇ ಕಲೆ ಅಲ್ಲ. ಅಭಿವ್ಯಕ್ತಿಯ ಪರಿಣಾಮದ ಫಲ ಕಲೆಯಾಗುತ್ತದೆ. ಇಂಥ ಅಭಿವ್ಯಕ್ತಿಯ ದಾಖಲೆಯನ್ನು

ಕಲಾಕೃತಿಯೆಂದು ಕರೆಯುತ್ತೇವೆ. ಕಲಾವಿದನ ಕಾಲದ ನಂತರವೂ ಸಹ ಆತನ ಅಭಿವ್ಯಕ್ತಿಗಳು ಬದುಕಿರುತ್ತವೆ. ಆದರೆ ಪ್ರದರ್ಶನಕಲೆಗಳಲ್ಲಿ ಹೀಗಲ್ಲ. ಈ ಕಲೆಗಳ ಅಭಿವ್ಯಕ್ತಿಗಳು ತಮ್ಮ ಕಲಾವಿದನಿಲ್ಲದೇ ಬದುಕಲಾರವು. ಇವುಗಳನ್ನು ಆ ಕಲಾವಿದರು ದೃಶ್ಯಕಲೆಗಳಂತೆ, ತಮ್ಮಿಂದ ಹೊರಗೆ ದಾಖಲಿಸಲು ಸಾಧ್ಯವಿಲ್ಲ. (ಧ್ವನಿಮುದ್ರಿಕೆಗಳು, ಚಲನಚಿತ್ರಗಳು ಇದಕ್ಕೆ ಹೊರತಾಗಿವೆ. ಇದನ್ನು ಮುಂದೆ ವಿವರಿಸಲಾಗಿದೆ)

ದೃಶ್ಯಕಲಾವಿದ ತನ್ನ ಅಭಿವ್ಯಕ್ತಿಯ ಸಮಯದಲ್ಲಿ ಏನಾದರೂ ತಪ್ಪು ಮಾಡಿದರೆ ಅದನ್ನು ನೋಡುಗರಿಗೆ ಗೊತ್ತಾಗದಂತೆ ಸರಿಮಾಡಿಕೊಳ್ಳಬಹುದು. ಉದಾಹರಣೆಗೆ ಒಂದು ಚಿತ್ರ ಬರೆಯುವಾಗ ಅಕಸ್ಮಾತ್ ಯಾವುದಾದರೂ ಭಾಗ ಕೆಟ್ಟುಹೋದರೆ, ಅದನ್ನು ಅಳಿಸಿ, ಮತ್ತೆ ಸರಿಯಾಗಿ ಬರೆಯಬಹುದು. ಇದರಿಂದ ಕಲಾವಿದನಿಗೆ ಯಾವುದೇ ತರಹದ ಅಪಮಾನ ಅಳುಕು ಮುಜುಗರ ಉಂಟಾಗುವುದಿಲ್ಲ. ಆತನ ಈ ತಪ್ಪು ಕಲಾಕೃತಿಯನ್ನು ನೋಡುಗರಿಗೆ ಗೊತ್ತಾಗುವುದೇ ಇಲ್ಲ. ಅಭಿವ್ಯಕ್ತಿಯಲ್ಲಿ ನಡೆದ ದೋಷಗಳ ಮೂಲದಲ್ಲಿ ದೃಶ್ಯಕಲೆಯನ್ನು ಕಳಪೆ ಎಂದು ಅಥವಾ ಕೆಳದರ್ಜೆಯದೆಂದು ತೀರ್ಮಾನಿಸಲು ಸಾಧ್ಯವಿಲ್ಲ. ಮೂಲತಃ ಇವನ ಅಭಿವ್ಯಕ್ತಿ ನೋಡುಗರ ಎದುರಿನಲ್ಲಿ ನಡೆಯುವಂಥದ್ದಲ್ಲ ಆದರೆ ಪ್ರದರ್ಶನಕಲೆಗಳಲ್ಲಿ ಹೀಗೆ ಆಗುವುದಿಲ್ಲ.

ಪ್ರದರ್ಶನಕಲೆಯ ಅಭಿವ್ಯಕ್ತಿಯಲ್ಲಿ ಕಲಾವಿದ ಒಂದು ಬಾರಿ ತಪ್ಪು ಮಾಡಿದರೆ, ತಿದ್ದಿಕೊಳ್ಳುವ ಅವಕಾಶವೇ ಇಲ್ಲ. ಉದಾಹರಣೆಗೆ ಒಂದು ಸಂಗೀತ ಕಚೇರಿಯಲ್ಲಿ ಕಲಾವಿದ ಹಾಡುವಾಗ ಶೃತಿತಪ್ಪಿದರೆ ಅಥವಾ ಲಯ ತಪ್ಪಿದರೆ, ಇಲ್ಲವೇ ಒಂದು ನಾಟಕದಲ್ಲಿ ನಟ ತನ್ನ ಸಂಭಾಷಣೆ ತಪ್ಪಿದರೆ, ಅವುಗಳನ್ನು ತಿದ್ದಿಕೊಳ್ಳಲು ಅವಕಾಶವೇ ಇಲ್ಲ. ಇದರಿಂದ ಕಲಾವಿದನ ಪ್ರತಿಭೆ ಕೆಳದರ್ಜೆಯದೆಂದು ಭಾವಿಸಲಟು ಆತನ ಕಲಾಭಿವ್ಯಕ್ತಿ ಅಪಹಾಸ್ಯಕ್ಕೆ ಗುರಿಯಾಗಿ, ಅದು ಆ ಕಲೆಯ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ. ಒಂದು ಪಕ್ಷ ಮರುಕ್ಷಣವೇ ಮತ್ತೊಮ್ಮೆ ಸರಿಯಾಗಿ ಅಭಿವ್ಯಕ್ತಿಸಿದರೂ ಒಮ್ಮೆ ಹೋದ ಕಲಾವಿದನ ಮಾನ ಮತ್ತೆ ಬರುವುದಿಲ್ಲ. ಏಕೆಂದರೆ ಪ್ರದರ್ಶನಕಲೆಗಳ ಅಭಿವ್ಯಕ್ತಿಗಳು ಲೋಕಾಂತದಲ್ಲಿ ನಡೆಯುವಂಥವುಗಳು. ಆದರೆ ದೃಶ್ಯಕಲೆಗಳ ಅಭಿವ್ಯಕ್ತಿಗಳು ಏಕಾಂತದಲ್ಲಿ ನಡೆಯುವಂಥವುಗಳು. (ಜನಸಮುದಾಯದ ಎದುರು ಅಭಿವ್ಯಕ್ತಿ ನಡೆಸುವ ಪ್ರಾತ್ಯಕ್ಷಿತೆ ಇತ್ಯಾದಿ ರಚನೆಗಳು ಇದಕ್ಕೆ ಅಪವಾದವಾಗಿವೆ).

ದೃಶ್ಯಕಲಾವಿದ ಎಲ್ಲಿಂದ ಬೇಕಾದರೂ ತನ್ನ ಕಲೆಯ ಅಭಿವ್ಯಕ್ತಿಯನ್ನು ಆರಂಭಿಸುತ್ತಾನೆ. ಉತ್ಸಾಹ ಕುಗ್ಗಿದಾಗ ಮಧ್ಯದಲ್ಲಿ ಯಾವಾಗಬೇಕಾದರೂ ಅಭಿವ್ಯಕ್ತಿಯನ್ನು ಅರ್ಧಕ್ಕೆ ನಿಲ್ಲಿಸುತ್ತಾನೆ. ಮತ್ತೆ ನಾಳೆಯೋ ನಾಳಿದ್ದೋ ತನಗೆ ಬೇಕೆಂದಾಗ ಅದನ್ನು ಮುಂದುವರಿಸುತ್ತಾನೆ. ಆದರೆ ಪ್ರದರ್ಶನಕಲೆಗಳಲ್ಲಿ ಹೀಗೆ ಆಗುವುದಿಲ್ಲ. ಇಲ್ಲಿ ಒಂದು ಬಾರಿ ಅಭಿವ್ಯಕ್ತಿ ಕಾರ್ಯ ಪ್ರಾರಂಭವಾದರೆ ಕ್ರಮವಾಗಿ ಅಭಿವ್ಯಕ್ತಿಸಬೇಕು. ಉದಾಹರಣೆಗೆ ಸಂಗೀತದಲ್ಲಿ ಪಲ್ಲವಿ, ಅನುಪಲ್ಲವಿ, ಚರಣ ಹೀಗೆ ಕ್ರಮವಾಗಿ ಅಭಿವ್ಯಕ್ತಿಸಬೇಕು.

**ಕಾಲ**: ಪ್ರದರ್ಶನಕಲೆಗಳಿಗೆ ಕಾಲಬದ್ಧ (Spatial) ಕಲೆಗಳೆಂದು ಕರೆಯುತ್ತೇವೆ. ದೃಶ್ಯಕಲೆಗಳಿಗೆ ದೇಶಬದ್ಧ (Temporal) ಕಲೆಗಳೆಂದು ಕರೆಯುತ್ತೇವೆ. ಅಂದರೆ ದೃಶ್ಯಕಲೆಗಳು ದೇಶದಲ್ಲಿ (ಒಂದು ಸ್ಥಳದಲ್ಲಿ) ವಿಸ್ತಾರವಾಗುತ್ತವೆ. ಆದರೆ ಪ್ರದರ್ಶನಕಲೆಗಳು ಕಾಲದ ಜೊತೆ ವಿಸ್ತಾರವಾಗುತ್ತವೆ. ಅಂದರೆ ಅವು ಕಾಲದ ಜೊತೆ ಓಡುತ್ತವೆ. ಹಾಗೆಯೇ ಗತಿಸಿದ ಕಾಲದಲ್ಲಿ ಲಯವಾಗುತ್ತವೆ. ಅಥವಾ

ಕಾಲದ ಜೊತೆ ಸಾಯುತ್ತಾ ಸಾಗುತ್ತವೆ. ದೃಶ್ಯಕಲೆಗಳಂತೆ ಇವು ಕಾಲದ ಜೊತೆ ನಿರಂತರ ನಿಲ್ಲಲಾರವು.

ದೃಶ್ಯಕಲೆಗಳನ್ನು ನೋಡಲು ಕಾಲಮಿತಿ ಇಲ್ಲ. ಆದರೆ ಪ್ರದರ್ಶನಕಲೆಗಳನ್ನು ನೋಡಲು ಕಾಲದ ಕಟ್ಟಲೆ ಇದೆ. ಅಂದರೆ ಆ ಕಲೆಯ ಅಭಿವ್ಯಕ್ತಿ ಸಮಯಕ್ಕೆ ಸರಿಯಾಗಿ ಅವುಗಳನ್ನು ಆಸ್ವಾದಿಸಬೇಕು ಸ್ವಲ್ಪ ತಡವಾದರೂ ಅವುಗಳ ಆಸ್ವಾದನೆಯಲ್ಲಿ ವ್ಯತ್ಯಾಸವಾಗುತ್ತದೆ. ತುಂಬಾ ತಡವಾಗಿ ಹೋದರೆ ಅಭಿವ್ಯಕ್ತಿ ಮುಗಿದೇ ಹೋಗಿರುತ್ತದೆ. ಆಗ ಏನನ್ನೂ ಆಸ್ವಾದಿಸಲು ಸಾಧ್ಯವಿಲ್ಲ. ಆದ್ದರಿಂದ ಪ್ರದರ್ಶನ ಕಲೆಗಳನ್ನು ಸರಿಯಾದ ಅಭಿವ್ಯಕ್ತಿಯ ಕಾಲದಲ್ಲಿಯೇ ನೋಡಬೇಕು ಅಥವಾ ಕೇಳಬೇಕು. ಆದರೆ ದೃಶ್ಯಕಲೆಗಳ ಆಸ್ವಾದನೆಗೆ ಇಂಥ ಕಾಲದ ನಿಬಂಧನೆ ಇಲ್ಲ.

ದೃಶ್ಯಕಲೆಗಳ ಆಸ್ವಾದನೆಯನ್ನು ಸಹೃದಯ ತನಗೆ ಅನುಕೂಲವಾದ ಕಾಲದಲ್ಲಿ, ತನಗೇ ತೃಪ್ತಿಯಾಗುವಷ್ಟು ಕಾಲ ಮತ್ತೆ ಮತ್ತೆ ನೋಡಬಹುದು. ಇಲ್ಲಿ ಕಾಲವನ್ನು ತನಗೆ ಬೇಕಾದಂತೆ ಹಿಗ್ಗಿಸಿಕೊಳ್ಳಬಹುದು ಅಥವಾ ಕುಗ್ಗಿಸಿಕೊಳ್ಳಬಹುದು. ಆದರೆ ಪ್ರದರ್ಶನ ಕಲೆಗಳಲ್ಲಿ ಇದು ಸಾಧ್ಯವಿಲ್ಲ. ಪ್ರದರ್ಶನಕಲೆಗಳು ಕಾಲದ ಜೊತೆ ಓಡುವುದರಿಂದ ಆ ಕಾಲದ ಮಿತಿಯಲ್ಲಿಯೇ ಸಹೃದಯ ಈ ಕಲೆಗಳನ್ನು ಆಸ್ವಾದಿಸಬೇಕು. ಪ್ರದರ್ಶನಕಲೆಗಳಿಗೆ ಭೂತಕಾಲದ ಜೊತೆ ಹೋದ ದೃಶ್ಯವನ್ನು ವರ್ತಮಾನ ಕಾಲದಲ್ಲಿ ನೋಡಲಾಗದು. ಹಾಗೆಯೇ ವರ್ತಮಾನ ಕಾಲದಲ್ಲಿ ಸಾಗಿರುವ ದೃಶ್ಯವನ್ನು ನೋಡುತ್ತಿದ್ದಾಗ, ಭವಿಷ್ಯತ್ ಕಾಲದಲ್ಲಿ ಅಡಗಿ ನಿಂತಿರುವ ದೃಶ್ಯವನ್ನೂ ಸಹ ವರ್ತಮಾನ ಕಾಲದಲ್ಲಿ ನೋಡಲಾಗದು. ಹಾಗೆಯೇ ವರ್ತಮಾನ ಕಾಲದಲ್ಲಿ ಸಾಗಿರುವ ದೃಶ್ಯವನ್ನು ನೋಡುತ್ತಿದ್ದಾಗ, ಭವಿಷ್ಯತ್ ಕಾಲದಲ್ಲಿ ಅಡಗಿ ನಿಂತಿರುವ ದೃಶ್ಯವನ್ನೂ ಸಹ ವರ್ತಮಾನ ಕಾಲದಲ್ಲಿ ನೋಡಲು ಸಾಧ್ಯವಿಲ್ಲ. ಆದರೆ ದೃಶ್ಯಕಲೆಗಳಿಗೆ ಇಂಥ ತ್ರಿಕಾಲಗಳಿಲ್ಲ. ಆದ್ದರಿಂದ ಪ್ರದರ್ಶನಕಲೆಗಳು ಕಾಲಬದ್ಧ ಕಲೆಗಳಾಗಿವೆ. ಆದರೆ ದೃಶ್ಯಕಲೆಗಳು ಕಾಲಬದ್ಧ ಕಲೆಗಳಲ್ಲ. ಇವು ದೇಶಬದ್ಧ ಕಲೆಗಳೆಂಬುದು ಇಲ್ಲಿ ಮುಖ್ಯವಾಗಿವೆ.

**ಆಖ್ಯಾನ** : ಪ್ರದರ್ಶನಕಲೆಗಳ ಅಭಿವ್ಯಕ್ತಿಯ ಹಿಂದೆ ಒಂದು ಆಖ್ಯಾನದ (Script) ನಿಬಂಧನೆ ಇರುತ್ತದೆ. ಆದರೆ ಒಂದು ನಿರೂಪಣೆಯ ನಿರ್ದಿಷ್ಟ ಚೌಕಟ್ಟಿರುತ್ತದೆ. ಅದನ್ನು ನಾಟ್ಯ – ನಾಟಕಗಳಲ್ಲಿ ಆಖ್ಯಾನವೆನ್ನುತ್ತಾರೆ. ಸಂಗೀತದಲ್ಲಿ ರಾಗ ರಚನೆ (ನೊಟೇಶನ್) ಎನ್ನುತ್ತಾರೆ. ಆ ನಿರೂಪಣಾ ಕೃತಿಯ ಚೌಕಟ್ಟಿನ ವ್ಯಾಪ್ತಿಯಲ್ಲಿಯೇ ಈ ಕಲೆಗಳು ಸಾಗಬೇಕು. ಯಾವ ಕಾರಣಕ್ಕೂ ಆಖ್ಯಾನದಲ್ಲಿ ಬದಲಾವಣೆ ತರುವ ಸ್ವಾತಂತ್ರ್ಯ ಕಲಾವಿದರಿಗಿಲ್ಲ. ಆಖ್ಯಾನದ ಪರಿಧಿಯಲ್ಲಿಯೇ ಪ್ರದರ್ಶನಕಲೆಗಳು ಸಾಗುತ್ತವೆ. ಆದರೆ ದೃಶ್ಯಕಲೆಗಳಿಗೆ ಇಂಥ ಯಾವುದೇ ಆಖ್ಯಾನದ ಬಂಧನವಿಲ್ಲ. ಇಲ್ಲಿ ಕಲಾವಿದ ಸರ್ವತಂತ್ರ ಸ್ವತಂತ್ರನು. ಆತ ತನಗೆ ಹೇಗೆ ಬೇಕೋ ಹಾಗೆ ಕಲೆಯ ಅಭಿವ್ಯಕ್ತಿ ನಡೆಸುತ್ತಾನೆ. ಅನೇಕ ಸಂದರ್ಭಗಳಲ್ಲಿ ತನಗೆ ಆತಂಕವೆನಿಸಿದ ಶಾಸ್ತ್ರ ಅಂಧನಗಳನ್ನು ಸಹ ಮುರಿದು ಮುನ್ನುಗ್ಗುತ್ತಾನೆ.

**ಕಲಾವಿದ** : ಪ್ರದರ್ಶನ ಕಲಾವಿದನಿಗೆ ವಿಶೇಷವಾಗಿ ನರ್ತಕರಿಗೆ ಮತ್ತು ನಟರಿಗೆ ದೈಹಿಕವಾದ ಅರ್ಹತೆಗಳು ಬೇಕಾಗುತ್ತವೆ. ಅಂದರೆ ಆತನ ಎತ್ತರ, ದಪ್ಪ ಹೀಗೆಯೇ ಇರಬೇಕೆಂಬ ಶಾಸ್ತ್ರ ನಿಯಮಗಳಿವೆ. ಆದರೆ ದೃಶ್ಯಕಲಾವಿದನಿಗೆ ಇಂಥ ದೈಹಿಕ ಅರ್ಹತೆಯ ಕಟ್ಟುಪಾಡುಗಳಿಲ್ಲ. ಕೈಗಳಿಲ್ಲದವರೂ ಸಹ ಕಾಲುಗಳ ಮೂಲಕ ಕಲಾಕೃತಿ ರಚಿಸಿದ ನಿದರ್ಶನಗಳಿವೆ. ಕುರುಡರೂ ಸಹ ನಿರ್ಮಿಸಬಹುದಾದ ಒಂದು ವೈಜ್ಞಾನಿಕ ರಚನಾ ವಿಧಾನವಿದೆ.

ಪ್ರದರ್ಶನ ಕಲೆಗಳಲ್ಲಿ ಕಲಾವಿದ ಸಮೂಹ ವಾದ್ಯಗಳೊಂದಿಗೆ ಅಥವಾ ಸಹ ಪಾತ್ರಧಾರಿಗಳೊಂದಿಗೆ ತನ್ನ ಅಭಿವ್ಯಕ್ತಿಯ ಮೇಲೆ ಸಾಧಿಸಬೇಕು. ಸಹವಾದ್ಯಗಳು ಅಥವಾ ಸಹಪಾತ್ರಧಾರಿಗಳು ಎಷ್ಟೇ ಚಮತ್ಕಾರಕವಾಗಿದ್ದರೂ ಅವರನ್ನು ಹಿಂದೆ ಹಾಕಿ ಮುಂದೆ ನುಗ್ಗುವ ಯೋಗ್ಯತೆ ಕಲಾವಿದನಲ್ಲಿರಬೇಕು. ಇಲ್ಲವಾದರೆ ಇವನೇ ಕೆಳದರ್ಜೆಗೆ ಇಳಿಯುತ್ತಾನೆ. ಹೀಗೆ ಇವನು ಕಳಪೆಯಾದರೆ, ಆ ಕಲೆಯ ಸೋಲು ಸಂಭವಿಸುತ್ತದೆ. ಆದರೆ ದೃಶ್ಯಕಲಾವಿದನಿಗೆ ಇಂಥ ಆತಂಕ ಮತ್ತು ಅಪಾಯವಿಲ್ಲ. ಇಲ್ಲಿ ಕಲಾವಿದ ಯಾರೊಂದಿಗೂ ಪೈಪೋಟಿ ನಡೆಸಬೇಕಾಗಿಲ್ಲ.

ದೃಶ್ಯಕಲೆಗಳಲ್ಲಿ ಕಲಾವಿದ ತಾನು ಕಂಡ ಅನುಭವವನ್ನು ನೇರವಾಗಿ ಅಭಿವ್ಯಕ್ತಿಸುತ್ತಾನೆ. ಆದರೆ ಪ್ರದರ್ಶನ ಕಲಾವಿದನಿಗೆ ಇದು ಸಾಧ್ಯವಿಲ್ಲ. ಅಲ್ಲಿ ಅವನು ಬೇರೆಯವರು ಅನುಭವಿಸಿದ ಅಂದರೆ ಕೃತಿಕಾರ ಅನುಭವಿಸಿದ ಅನುಭವವನ್ನು ಪರಕಾಯ ಪ್ರವೇಶ ಮಾಡಿ ಅದಕ್ಕೆ ನ್ಯಾಯ ದೊರಕಿಸಿಕೊಡಬೇಕು.

**ಸಹೃದಯ** : ಪ್ರದರ್ಶನ ಕಲೆಗಳು ಪ್ರದರ್ಶನಗೊಳ್ಳಬೇಕಾದರೆ, ಅಲ್ಲಿ ನೋಡುಗರು ಅಥವಾ ಸಹೃದಯರು ಕಡ್ಡಾಯವಾಗಿ ಬೇಕೇಬೇಕು. ಇವರು ಇಲ್ಲದಿದ್ದರೆ ಅಥವಾ ಒಬ್ಬರೋ ಇಬ್ಬರೋ ಇದ್ದರೆ, ಪ್ರದರ್ಶನಕಲೆಗಳ ಕಾರ್ಯಕ್ರಮಗಳು ನಡೆಯಲು ಸಾಧ್ಯವಿಲ್ಲ. ಒಂದು ಪಕ್ಷ ನಡೆದರೂ ಸಹ ಅದು ಯಶಸ್ವಿಯಾಗಲಾರದು. ಈ ಕಲೆಗಳ ಪ್ರದರ್ಶನಗಳಲ್ಲಿ, ಪ್ರೇಕ್ಷಕ ವರ್ಗ, ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲದಿದ್ದರೆ ಕಲಾವಿದರಿಗೆ ಉತ್ಸಾಹ ಮತ್ತು ಚೈತನ್ಯ ಇರುವುದಿಲ್ಲ. ಹೆಚ್ಚು ಹೆಚ್ಚು ನೋಡುಗರಿದ್ದಷ್ಟೂ ಈ ಕಲೆಗಳು ಹೆಚ್ಚು ಹೆಚ್ಚು ಪ್ರಭಾವಪೂರ್ಣವಾಗಿ ಅಭಿವ್ಯಕ್ತಿ ಹೊಂದುತ್ತವೆ. ಸಹೃದಯರ ಪ್ರತಿಕ್ರಿಯೆಗಳು ಅಭಿವ್ಯಕ್ತಿಯ ಮೇಲೆ ಪರಿಣಾಮ ಬೀರುತ್ತವೆ. ಆದರೆ ದೃಶ್ಯಕಲೆಗಳ ಪ್ರದರ್ಶನಕ್ಕೆ ಅಥವಾ ಅಭಿವ್ಯಕ್ತಿಗೆ ಸಹೃದಯರು ಬೇಕೇಬೇಕೆಂಬ ಅನಿವಾರ್ಯತೆ ಇಲ್ಲ. ಇಲ್ಲಿ ಸಹೃದಯರು ಇರಲಿ ಇಲ್ಲದಿರಲಿ, ಈ ಕಲೆಗಳ ಪ್ರದರ್ಶನ ಅಥವಾ ಅಭಿವ್ಯಕ್ತಿ ಯಥಾರೀತಿ ಸಾಗುತ್ತದೆ. ಪ್ರೇಕ್ಷಕರಿಲ್ಲದಿದ್ದರೂ ಅಭಿವ್ಯಕ್ತಿಯಲ್ಲಿ ಏರುಪೇರುಗಳಾಗುವುದಿಲ್ಲ. ಇಲ್ಲಿ ಸಹೃದಯರ ಪ್ರತಿಕ್ರಿಯೆಗಳು ಅಭಿವ್ಯಕ್ತಿಯ ಮೇಲೆ ಯಾವುದೇ ಪರಿಣಾಮ ಬೀರುವುದಿಲ್ಲ.

ಪ್ರದರ್ಶನ ಕಲೆಗಳಲ್ಲಿ ಸಹೃದಯ ಚಪ್ಪಾಳೆ, ಸಿಳ್ಳೆ, ಕೇಕೆ, ವ್ಹಾ, ವಾರೆವ್ಹಾ, ಭೇಷ್, ಶಹಬ್ಬಾಷ್ ಎಂಬ ಉದ್ಗಾರಗಳು, ಕಲಾವಿದರಿಗೆ ಉತ್ಸಾಹ, ಉತ್ತೇಜನಗಳನ್ನು ತರುತ್ತವೆ. ಹೀಗಿದ್ದಾಗ ಈ ಕಲೆಗಳ ಅಭಿವ್ಯಕ್ತಿಗಳು ಇನ್ನೂ ಶ್ರೇಷ್ಠವಾಗಿ ಸಾಗುತ್ತವೆ. ಒಂದು ಪಕ್ಷ ಸಹೃದಯರು ಪ್ರದರ್ಶನದ ನಡುವೆ ಆಗಾಗ ಎದ್ದು ಎದ್ದು ಹೋದರೆ ಅಥವಾ ಒಬ್ಬರಿಗೊಬ್ಬರು ಮಾತನಾಡುತ್ತಾ ಕೂತರೆ, ಇಲ್ಲವೇ ಛೀ. ಥೂ ಎಂದು ಉದ್ಗಾರ ತೆಗೆದರೆ, ಇವು ಕಲಾವಿದರಿಗೆ ಬೇಜಾರ, ನಿರುತ್ಸಾಹಗಳನ್ನು ತರುತ್ತವೆ. ಇದರಿಂದ ಕಲೆಯ ಅಭಿವ್ಯಕ್ತಿಯಲ್ಲಿ ಕೆಟ್ಟ ಪರಿಣಾಮ ಉಂಟಾಗಿ ಇಡೀ ಕಲಾಪ್ರದರ್ಶನವೇ ನೀರಸವಾಗುತ್ತಾ ಕೆಳದರ್ಜೆಗಿಳಿಯುತ್ತದೆ. ಆದರೆ ದೃಶ್ಯಕಲೆಗಳಲ್ಲಿ ಇಂಥ ಅಪಾಯವೇ ಇಲ್ಲ. ದೃಶ್ಯಕಲೆಗಳ ಅಭಿವ್ಯಕ್ತಿಯ ಸಂದರ್ಭದಲ್ಲಿ ಪ್ರೇಕ್ಷಕರೇ ಇರುವುದಿಲ್ಲ. ಹಾಗೆಯೇ ದೃಶ್ಯಕಲೆಗಳ ಪ್ರದರ್ಶನದಲ್ಲಿ ದೊರೆಯುವ ಸಹೃದಯರ ಪ್ರತಿಕ್ರಿಯೆಗಳು ಕಲೆಯ ಮೇಲೆ ಅಥವಾ ಕಲಾವಿದನ ಮೇಲೆ ಯಾವುದೇ ಪರಿಣಾಮ ಬೀರುವುದಿಲ್ಲ. ಏಕೆಂದರೆ ಕಲೆಯ ಅಭಿವ್ಯಕ್ತಿ ಕಾರ್ಯ ಮೊದಲೇ ಮುಗಿದು ಹೋಗಿರುತ್ತದೆ. ಇನ್ನು ಕಲಾವಿದನೋ ಅಲ್ಲಿರುವುದೇ ಇಲ್ಲ. ಕೆಲವು ದೃಶ್ಯಕಲಾ ಪ್ರದರ್ಶನಗಳಲ್ಲಿ ಕಲಾವಿದ ಬದುಕಿರುವುದೇ ಇಲ್ಲ.

**ಸೌಂದರ್ಯ** : ದೃಶ್ಯಕಲೆಗಳಲ್ಲಿ ನಿಜವಾದ ಸೌಂದರ್ಯವಿದ್ದರೆ, ಪ್ರದರ್ಶನ ಕಲೆಗಳಲ್ಲಿ ಸೌಂದರ್ಯವು ಕಲ್ಪನಾತ್ಮಕ ಊಹಾತ್ಮಕ ಅಥವಾ ಭಾವನಾತ್ಮಕವಾಗಿದೆ. ಕೆಲವು ಕಲೆಗಳಲ್ಲಿ ಸೌಂದರ್ಯದ ಉತ್ಪತ್ತಿ ಇರದೇ ಕೇವಲ ಇಂದ್ರಿಯಾನಂದವಿದೆ.

ಶ್ರವ್ಯಕಲೆಗಳು (ಸಂಗೀತ-ಕಾವ್ಯ) ಕಿವಿಯಿಂದ ಕೇಳಿ ಆಸ್ವಾದಿಸುವಂಥವುಗಳು. ದೃಶ್ಯಕಲೆಗಳು ಕಣ್ಣಿನಿಂದ ನೋಡಿ ಆಸ್ವಾದಿಸುವಂಥವುಗಳು. ನೃತ್ಯ ನಾಟಕಗಳು ಕಣ್ಣು ಮತ್ತು ಕಿವಿ ಎರಡರಿಂದಲೂ ಅನುಭವಿಸುವಂಥವುಗಳು. ಇದರಿಂದ, ಕಿವಿಯ ಮೂಲಕ ಕೇಳಿ ಅನುಭವಿಸುವ ನಿರಾಕಾರ ಮೂಲದ ಮಾಧುರ್ಯಾನಂದಕ್ಕೂ, ಕಣ್ಣಿನಿಂದ ನೋಡಿ ಅನುಭವಿಸುವ ಸಾಕಾರ ಮೂಲದ ರೂಪಕ ಸೌಂದರ್ಯದ ನಿರ್ದಿಷ್ಟ ಸಂತೋಷಕ್ಕೂ ಅಪಾರ ಅಂತರವಿದೆ. ಇವೆರಡೂ ಕಲಾ ಪ್ರಕಾರಗಳ ಪರಿಕಲ್ಪನೆ, ಪ್ರಭಾವ, ಪರಿಣಾಮ ಹಾಗೂ ಪ್ರಯೋಜನಗಳ ನೆಲೆಗಳಲ್ಲಿಯೇ ಅನೇಕ ಪ್ರಭೇದಗಳನ್ನು ಗುರುತಿಸಬಹುದಾಗಿದೆ. ಇದರಿಂದ ಮಾಧುರ್ಯ ಮತ್ತು ಸೌಂದರ್ಯಗಳು ಒಂದೇ ಆಗಲು ಸಾಧ್ಯವಿಲ್ಲ. ಮಾಧುರ್ಯವು ನಿರ್ದಿಷ್ಟ ವಿನ್ಯಾಸದ ಹಿಡಿತಕ್ಕೆ ಸಿಗಲಾರದ್ದು. ಈ ಮಾಧುರ್ಯಕ್ಕೆ ನಾವು ಸೌಂದರ್ಯವೆನ್ನುತ್ತಾ ಬಂದಿದ್ದೇವೆ. ಮಾಧುರ್ಯವು ಅನಿರ್ದಿಷ್ಟ ಮತ್ತು ಆಕಾರ ರಹಿತವಾದದ್ದು. ಅಂದರೆ ಅದು ವಿಧವಿಧವಾದ ಆನಂದಾನುಭವಗಳ ಪರಿಕಲ್ಪನೆಗಳನ್ನು ಕೊಡುವಂಥದ್ದು. ಅದು ಪ್ರವಾಹದಂತೆ ಚಲನಶೀಲವಾದದ್ದು. ಆದರೆ ದೃಶ್ಯಕಲಾ ಸೌಂದರ್ಯಾನುಭವ ಹಾಗಲ್ಲ. ಅದು ರೂಪಕ ಜಗತ್ತಿನಲ್ಲಿ ಒಂದು ನಿರ್ದಿಷ್ಟ ವಿನ್ಯಾಸದ ಹಿಡಿತಕ್ಕೆ ನಿಲುಕುವಂಥದ್ದು.

ಶ್ರವ್ಯಕಲೆಗಳ ಧ್ವನಿಯ ಮೂಲಕ ದೊರಕುವ ಆನಂದಾನುಭವ ಸಹೃದಯರ ಯಾವುದೇ ಊಹೆ, ಕಲ್ಪನೆಗಳಿಗೆ ಅತೀತವಾದದ್ದು. ಅಂದರೆ ಅವುಗಳಿಗೆ ನಿಲುಕುವಂಥದ್ದಲ್ಲ. ಆದರೆ ದೃಶ್ಯಕಲೆಗಳ ಸೌಂದರ್ಯಾನುಭವ ಊಹೆ ಕಲ್ಪನೆಗಳನ್ನು ಒಳಗೊಂಡೇ ಅದರ ಹಿಡಿತದಲ್ಲಿಯೇ ನಿರ್ಮಾಣಗೊಂಡವು. ಅದರ ವ್ಯಾಪ್ತಿಯಲ್ಲಿ ಸಹೃದಯರನ್ನು ಎಳೆದಾಡುವಂಥದ್ದು. ಶ್ರವ್ಯಕಲೆಗಳ ಆನಂದಾನುಭವ ಅನಿಶ್ಚಿತತೆಯಿಂದ, ನಿರಾಕಾರ ಧ್ವನಿ ಸೌಜ್ಞೆಗಳಿಂದ, ಅಲೌಕಿಕದತ್ತ ಕರೆದೊಯ್ಯು ವಂಥದ್ದು. ಆದರೆ ದೃಶ್ಯಕಲೆಗಳ ಸೌಂದರ್ಯ ನಿಶ್ಚಿತ ಲೌಕಿಕ ಆಕಾರಗಳ ಮೂಲದಿಂದ ಅಲೌಕಿಕದತ್ತ ಕರೆದೊಯ್ಯುವಂಥದ್ದು. ಶ್ರವ್ಯಕಲೆಗಳಲ್ಲಿ ಸಾಹಿತ್ಯದ ಭಾಷಾ ಮೂಲದಿಂದ ಹೊರಹೊಮ್ಮುವ ಸೌಂದರ್ಯದ ಪರಿಕಲ್ಪನೆ ಊಹಾತ್ಮಕವಾದದ್ದು. ಉದಾಹರಣೆಗೆ ಒಬ್ಬ ಸಂಗೀತಗಾರ ಅಥವಾ ಒಬ್ಬ ಸಾಹಿತಿ ಇಂದ್ರಲೋಕದ ಒಂದು ವರ್ಣನೆಯನ್ನು ಮಾಡಿದರೆ ಅದನ್ನೂ ಊಹಿಸಿಕೊಳ್ಳಬೇಕಾಗುತ್ತದೆ. ಅಂದರೆ ಅಲ್ಲಿ ನಿರ್ದಿಷ್ಟ ವಿನ್ಯಾಸಗಳ ರೂಪಕ ಜಗತ್ತನ್ನು ಸೃಷ್ಟಿಸಲು ಸಾಧ್ಯವಿಲ್ಲ. ಕಾವ್ಯದ ಶಾಬ್ದಿಕ ರೂಪ ನಿರ್ಮಾಣವು ದೃಶ್ಯಕಲೆಗಳ ನಿರ್ದಿಷ್ಟ ಹಿಡಿತಕ್ಕೆ ನಿಲುಕು ವಂಥದ್ದಲ್ಲ. ಅದು ಇಂದ್ರಲೋಕದ ಕಲ್ಪನಾತ್ಮಕ ರೂಪಾನುಭವವನ್ನು ಉಂಟುಮಾಡುವಂಥದ್ದು. ಆದರೆ ಅದೇ ಇಂದ್ರಲೋಕವನ್ನು ಒಬ್ಬ ದೃಶ್ಯಕಲಾವಿದ ನಿರ್ಮಿಸಿ ತೋರಿದಾಗ ಅದು ಇಂದ್ರ ಲೋಕದ ನಿಜವಾದ ರೂಪಾನುಭವವನ್ನು ಎಲ್ಲರಿಗೂ ಒಂದೇ ರೂಪಕ ಜಗತ್ತಿನಲ್ಲಿ ನೀಡುತ್ತದೆ.

ಸೌಂದರ್ಯವೆಂದರೆ ಕಣ್ಣಿನಿಂದ ನೋಡಿ ಅನುಭವಿಸುವಂಥದ್ದೇ ವಿನಾ ಕಿವಿಯಿಂದ ಕೇಳಿ ಅನುಭವಿಸುವಂಥದ್ದಲ್ಲ. ಆದ್ದರಿಂದ ಶ್ರವ್ಯಾದಿ ಪ್ರದರ್ಶನಕಲೆಗಳ ಆನಂದಾನುಭವವನ್ನು ಸೌಂದರ್ಯವೆಂದು ಕರೆಯುವುದೇ ದೋಷಪೂರ್ಣವಾದ ಅಭಿಪ್ರಾಯ ಮತ್ತು ಅಭಿಮತ. ರುಚಿಕರವಾದ ಭಕ್ಷ್ಯವನ್ನು ಬಾಯಿಯಿಂದ ಭೋಜಿಸಿ ಆನಂದ ಅಥವಾ ಸಂತೋಷ ಹೊಂದಿದಾಗ

ಉಂಟಾಗುವ ತೃಪ್ತಿಯನ್ನು ಸೌಂದರ್ಯವೆಂದು ಕರೆಯಲಾಗುವುದಿಲ್ಲ. ಹಾಗೆಯೇ ಸುವಾಸನೆಯುಕ್ತ ಸುಗಂಧ ದ್ರವ್ಯಗಳನ್ನೋ ಹೂಗಳನ್ನೋ ಮೂಸಿದಾಗ ಉಂಟಾಗುವ ಅಹ್ಲಾದ ಸೌಂದರ್ಯವಲ್ಲ. ಆ ಹೂಗಳನ್ನು ಕಣ್ಣಿನಿಂದ ನೋಡಿದಾಗ ಉಂಟಾಗುವುದು ಸೌಂದರ್ಯ. ಸೌಂದರ್ಯ ಕಣ್ಣಿನಿಂದ ನೋಡಿ ಮಾತ್ರ ಅನುಭವಿಸುವಂಥದ್ದು. ಇದರಿಂದ ದೃಶ್ಯಕಲೆಗಳ ಆನಂದಾನುಭವಕ್ಕೆ ಮಾತ್ರ ಸೌಂದರ್ಯಾನುಭವವೆಂದು ಹೇಳಬಹುದುದಾಗಿದೆ. ಆದ್ದರಿಂದ ಶ್ರವ್ಯಾದಿ ಪ್ರದರ್ಶನಕಲೆಗಳ ಆನಂದಾನುಭವ ನೇರ ಅಥವಾ ಪ್ರತ್ಯಕ್ಷ ಸೌಂದರ್ಯದ ಅನುಭವವಾಗಲಾರದು.

ಪ್ರದರ್ಶನಕಲೆಗಳ ಸೌಂದರ್ಯ ಊಹಾತ್ಮಕ ಹಾಗೂ ಭಾವನಾತ್ಮಕವಾದದ್ದು. ಅಂದರೆ ಇಲ್ಲಿ ವಸ್ತುವಿನಲ್ಲಿ ಸೌಂದರ್ಯವಿರುವುದಿಲ್ಲ. ಅನೇಕ ಇಚ್ಛಾ ಪ್ರಧಾನವಾದ ಅಂದರೆ ಪ್ರಿಯವಾದ ಸಂಗತಿಗಳ ಇಂಗಿತದ ಆಧಾರದ ಮೇಲೆ, ಭಾವುಕತೆ ತನಗೆ ಇಷ್ಟವಾದದ್ದನ್ನು ಸೌಂದರ್ಯವಾಗಿ ಪರಿವರ್ತಿಸಿ, ಅದು ತನಗೆ ಇಷ್ಟವೆಂದು ಸ್ವೀಕರಿಸುತ್ತದೆ ಅಥವಾ ಸೌಂದರ್ಯವಾಗಿ ಪರಿಭಾವಿಸುತ್ತದೆ. ಉದಾಹರಣೆಗೆ ಪ್ರತಿಯೊಬ್ಬ ತಾಯಿಗೂ ತಾನು ಹೆತ್ತ ಮಗುವು ಸುಂದರವೇ. ಆಕೆ ತನ್ನ ಮಗುವನ್ನು ಇಂದ್ರ, ಚಂದ್ರ, ಚಲುವ, ಸುರಸುಂದರ ಎಂದು ಕೊಂಡಾಡುತ್ತಾಳೆ. ಅದಕ್ಕೆ ಮತ್ತೆ ಮತ್ತೆ ಮುತ್ತಿಟ್ಟು ಆನಂದಿಸುತ್ತಾಳೆ. ಆಕೆಗೆ ಪ್ರಪಂಚದಲ್ಲಿ ತನ್ನ ಕಂದನಿಗಿಂತ ಸುಂದರವಾದ ಮಗು ಮತ್ತೊಂದಿಲ್ಲ. ಹಾಗೆಂದ ಮಾತ್ರಕ್ಕೆ ಪ್ರಪಂಚದಲ್ಲಿರುವ ಎಲ್ಲಾ ವ್ಯಕ್ತಿಗಳು ಸುಂದರರಾಗಿಯೇ ಇರುವರೇ? ಇಲ್ಲ. ಅಂದರೆ ಅವರವರ ತಾಯಿಗೆ ಎಲ್ಲರೂ ಸುಂದರರೇ. ಇದರಿಂದ ಇಲ್ಲಿ ಭಾವುಕ ಸೌಂದರ್ಯವಿದೆಯೇ ವಿನಾ ವಸ್ತು ಅಥವಾ ವಾಸ್ತವ ಸೌಂದರ್ಯವಿಲ್ಲ.

ಉಜ್ಜಯಿನಿಯ ಅರಸ ಯಶೋಧರನ ಹೆಂಡತಿ ಅಮೃತಮತಿ, ಸುರದ್ರೂಪಿ ಹಾಗೂ ಚಕ್ರಾಧಿಪತಿ ಗಂಡನನ್ನು ಬಿಟ್ಟು, ಒಬ್ಬ ಅತ್ಯಂತ ಕುರೂಪಿಯಾದ ಮತ್ತು ಆನೆಗಳ ಸೇವಕನಾದ ಅಷ್ಟವಾಂಕನೆಂಬ ಹಾಡುಗಾರರನನ್ನು ಪ್ರೀತಿಸುವುದಾಗಿ ಹಾತೊರೆಯುತ್ತಾಳೆ. ಆತ ನಿರಾಕರಿಸಿದರೂ ಆಕೆ ಅವನನ್ನು ತಬ್ಬುತ್ತಾಳೆ. ಇಲ್ಲಿ ಅಷ್ಟವಾಂಕನ ಸಂಗೀತದ ಪ್ರೌಢಿಮೆ ಮತ್ತು ಮಾಧುರ್ಯಗಳು ಅವಳಿಗೆ ಭಾವುಕತೆ ಉಂಟುಮಾಡಿ, ಅವನ ಮೇಲೆ ಇಚ್ಛೆ ಉಳ್ಳವಳಾಗುತ್ತಾಳೆ. ಅವನ ಸಂಗೀತದ ಸೆಳೆತ, ಅವಳಿಗೆ ಸೌಂದರ್ಯವಾಗಿ ನಿಲ್ಲುತ್ತದೆ. ಅಂದರೆ ಸೌಂದರ್ಯದ ಕಾರಣವಲ್ಲದೇ ಬೇರೆ ಕಾರಣವೂ ಸೌಂದರ್ಯದ ಸ್ಥಾನದಲ್ಲಿ ಬಯಕೆಯನ್ನು ಅಥವಾ ಇಚ್ಛೆ ಆಸೆಗಳನ್ನು ಹುಟ್ಟುಹಾಕುತ್ತದೆ.

ಇದೇ ರೀತಿ ಇನ್ನೊಂದು ಸಂದರ್ಭವನ್ನು ಉದಾಹರಿಸಬಹುದಾಗಿದೆ. ಕುರೂಪಿ, ಅರವತ್ತು ವರ್ಷದ ಮುದುಕ ಕವಿ ಬರ್ನಾಡ್‌ಷಹನ ಹಿಂದೆ, ಒಬ್ಬ ಸುಂದರವಾದ ಷೋಡಷಿ ಆತನನ್ನು ಪ್ರೇಮಿಸುವುದಾಗಿ ಬೆನ್ನು ಬೀಳುತ್ತಾಳೆ. ಅದಕ್ಕೆ ಕಾರಣ, ಬರ್ನಾಡ್‌ಷಹನ ಕಾವ್ಯ ಪ್ರೌಢಿಮೆ. ಆಕೆಗೆ ಆತನಂಥ ಬುದ್ಧಿವಂತನಾದ ಒಬ್ಬ ಮಗು ಅವನಿಂದ ಬೇಕೆಂಬ ಲವಲವಿಕೆ ಕಾಡಿರುತ್ತದೆ. ಇದರಿಂದ ಆಕೆ ಬರ್ನಾಡ್‌ಷಹನನ್ನು ವರಿಸಲು ತವಕಪಡುತ್ತಾಳೆ. ಇಲ್ಲಿಯೂ ಸೌಂದರ್ಯದ ಕಾರಣವಲ್ಲದ ಬೇರೆಯದೇ ಆದ ಸಂಗತಿಯ ಅಪೇಕ್ಷೆಯನ್ನು ತಂದು, ಬರ್ನಾಡ್‌ಷಹನಲ್ಲಿ ಸೌಂದರ್ಯದ ನೆಲೆ ಕಂಡುಕೊಳ್ಳುತ್ತದೆ. ಹೀಗೆ ಪ್ರದರ್ಶನಕಲೆಗಳಲ್ಲಿ ರೂಪಕ ಜಗತ್ತಿಗೆ ಸಂಬಂಧಿಸಿದ ಸತ್ಯವಾದ ಸೌಂದರ್ಯವಿರದೇ ಭಾವುಕ ಲೋಕದ ಸೌಂದರ್ಯವಿರುತ್ತದೆ. ಅದು ವಸ್ತು ನಿಷ್ಠವಾದ ಸತ್ಯ ಸೌಂದರ್ಯವಲ್ಲ. ಮಿತ್ಯ ಸೌಂದರ್ಯ. ಆದರೆ ದೃಶ್ಯಕಲೆಗಳ ಸೌಂದರ್ಯ ಸತ್ಯಸೌಂದರ್ಯ. ಅದು ರೂಪಕ ಜಗತ್ತಿನ ಸೌಂದರ್ಯ.

**ರಸ** : ದೃಶ್ಯಕಲೆಗಳಲ್ಲಿ ರಸಾನುಭವದ ಅಸ್ತಿತ್ವ ಪ್ರದರ್ಶನಕಲೆಗಳಂತೆ ಉಂಟಾಗುವುದಿಲ್ಲ. ಇಲ್ಲಿ ಕಲಾನುಭವವೆಂದರೆ ಕಲಾವಿದನ ಕೌಶಲ್ಯ. ಸೌಂದರ್ಯನುಭವವೆಂದರೆ ಆ ಕೌಶಲ್ಯದ ಅನುಭೂತಿ. ಇಲ್ಲಿ ಕಲಾಸೌಂದರ್ಯದಿಂದ ಸಹೃದಯನಲ್ಲಿ ಉಂಟಾಗುವ ವಿಸ್ಮಯವು ನವರಸಗಳ ಸಾಮರ್ಥ್ಯವನ್ನು ಹಿಂದೆ ತಳ್ಳಿ, ತಾನೇ ಅಧಿಪತಿಯಾಗಿ ಪ್ರಧಾನ ರಸದ ಸ್ಥಿತಿಯಲ್ಲಿ ಸಹೃದಯದ ಬುದ್ಧಿ ಮತ್ತು ಮನಸ್ಸನ್ನು ಆವರಿಸುತ್ತದೆ. ಇಲ್ಲಿ ಒಂಭತ್ತು ರಸಗಳ ಆಟವನ್ನೆಲ್ಲ ಸೌಂದರ್ಯ (ರಸ)ವು ಮೂಲೆಗುಂಪು ಮಾಡಿರುತ್ತದೆ. ಅಂದರೆ ಇಲ್ಲಿ ಸಹೃದಯ ನವರಸಗಳ ಪ್ರವಾಹ ತೀವ್ರತೆಯಲ್ಲಿ ಕೊಚ್ಚಿ ಹೋಗುವುದಿಲ್ಲ. ಇದರಿಂದ ದೃಶ್ಯಕಲೆಗಳಲ್ಲಿ, ಸೌಂದರ್ಯ ರಸವೊಂದೇ ವಿರಾಟ ವಿಶ್ವೇಶ್ವರ.

'ಪ್ರದರ್ಶನಕಲೆಗಳಲ್ಲಿ ಒಂಭತ್ತು ರಸಗಳು ಹುಟ್ಟುತ್ತವೆ' ಎಂದು ಅನೇಕ ಶಾಸ್ತ್ರ ಗ್ರಂಥಗಳೂ ಹೇಳುತ್ತವೆ. ಆದರೆ ದೃಶ್ಯಕಲೆಗಳಲ್ಲಿ ಅಂಥ ಜೀವಭೂತವಾದ ರಸೋತ್ಪತ್ತಿ ಇಲ್ಲವೆಂದು ನಮ್ಮ ಪ್ರಾಚೀನ ಅಲಂಕಾರಿಕರ ಅನಿಸಿಕೆಯಾಗಿದೆ. ಇದಕ್ಕೆ ಆನಂದವರ್ಧನನ ಅಭಿಪ್ರಾಯ ಸ್ಪಷ್ಟವಾದ ನಿದರ್ಶನವಾಗಿದೆ. ಆನಂದವರ್ಧನನು ಕಾವ್ಯದಲ್ಲಿ, ಉತ್ತಮ– ಮಧ್ಯಮ – ಅಧಮ ಎಂದು ಮೂರು ಭಾಗ ಮಾಡುತ್ತಾ ಮೂರನೇ ವರ್ಗದ ಕೆಟ್ಟ ಕಾವ್ಯವನ್ನು ಚಿತ್ರಕ್ಕೆ ಹೋಲಿಸಿದ್ದಾನೆ. 'ಚಿತ್ರ' ಎಂಬ ಆ ಕಾವ್ಯ ಪ್ರಕಾರ ಕುರಿತು ಆನಂದವರ್ಧನ ಹೇಳುವುದು ಹೀಗೆ. "ರಸಭಾವಾದಿ ತಾತ್ಪರ್ಯ ರಹಿತವೂ ವ್ಯಂಗ್ಯಾರ್ಥ ವಿಶೇಷ ಪ್ರಕಾಶನ ಶಕ್ತಿ ಶೂನ್ಯವೂ ಆಗಿರುವುದಲ್ಲದೇ, ಕೇವಲ ವಾಚ್ಯವಾಕ್ಯಗಳ ವೈಚಿತ್ರ್ಯದಿಂದ ಮಾತ್ರ ಕೂಡಿರುವ ಕಾರಣ, ಬಣ್ಣಗಳಿಂದ ಬರೆದ ಚಿತ್ರದಂತೆ, ಕಣ್ಣಿಗೆ ಡಬ್ಬಾಗಿ ಕಾಣುವಂಥ ಕಾವ್ಯ, ಚಿತ್ರವೆಂಬ ಕಾವ್ಯ ಪ್ರಕಾರ, ಉಳಿದ ಕಾವ್ಯಗಳಂತೆ ಅದು ಮುಖ್ಯವಾದ ಕಾವ್ಯ ಪ್ರಕಾರವೇ ಅಲ್ಲ" ಮಹಾಲಾಕ್ಷಣಿಕನಾದ ಮಹಿಮಭಟ್ಟನೂ ಇದನ್ನು ಎತ್ತಿ ಹಿಡಿದಿದ್ದಾನೆ.

ಹೀಗೆ ದೃಶ್ಯಕಲೆಗಳಲ್ಲಿ ನವರಸಗಳು ಉತ್ಪತ್ತಿಯಾಗುವುದಿಲ್ಲ. ಇಲ್ಲಿರುವುದು ಒಂದೇ ಒಂದು ರಸ. ಅದು ಸೌಂದರ್ಯ ರಸಮಾತ್ರ. ಇದನ್ನು ಅದ್ಭುತ, ವಿಸ್ಮಯ, ವಿಲಕ್ಷಣ, ಲಲಿತ, ಲಾಲಿತ್ಯ, ಲಾವಣ್ಯ, ಶೃಂಗಾರ, ಸುಂದರ, ಬೆಡಗು, ಚೆಲುವು, ರಮ್ಯ, ರಮಣೀಯ ಎಂಬೆಲ್ಲ ಹೆಸರುಗಳಿಂದ ಕರೆಯಬಹುದಾಗಿದೆ. ಇದನ್ನು ಕುರಿತು 'ದೃಶ್ಯಕಲೆಗಳು ಒಂದು ತೌಲನಿಕ ಅಧ್ಯಯನ' ಎಂಬ ಗ್ರಂಥದಲ್ಲಿ 100 ಪುಟಗಳಿಗೂ ಮಿಕ್ಕಿದ ವಿವರಣೆಯನ್ನು ಪುರಾವೆಗಳ ಸಹಿತ ಪ್ರತಿಪಾದಿಸಲಾಗಿದೆ. ಇಲ್ಲಿ ಅದರ ಕೆಲವು ಪ್ರಮುಖ ಅಂಶಗಳನ್ನು ಮಾತ್ರ ಪ್ರಸ್ತಾಪಿಸಲಾಗಿದೆ.

ದೃಶ್ಯಕಲೆಗಳಲ್ಲಿ ಬರಗಾಲ, ಭಿಕ್ಷುಕ, ಅಪಘಾತ, ಹೆಣ ಇತ್ಯಾದಿ ವಿಷಯಗಳ ಶೋಕ, ಭಯ, ಜಿಗುಪ್ಸೆ, ರಸಭಾವಗಳ ವಸ್ತುಗಳನ್ನೊಳಗೊಂಡ ಚಿತ್ರಶಿಲ್ಪಗಳೂ ಸಹ ಸೌಂದರ್ಯವನ್ನೇ ಪ್ರತಿಪಾದಿಸುವುದರಲ್ಲಿ ಇಲ್ಲಿ ಸೌಂದರ್ಯ ರಸವನ್ನು ಮಾತ್ರ ಗುರುತಿಸಬಹುದಾಗಿದೆ. ಇದನ್ನು ಆಂಗ್ಲಕವಿ ಮತ್ತು ಚಿತ್ರಕಲಾವಿದ ವಿಲಿಯಂ ಬ್ಲೇಕ್ ಅತ್ಯಂತ ಸ್ಪಷ್ಟವಾಗಿ ಸಾಬೀತುಪಡಿಸಿದ್ದಾನೆ.

ಪ್ರದರ್ಶನಕಲೆಯಲ್ಲಿ ಒಂದು ನಾಟ್ಯ ನೋಡಿದಾಗ ಕಾಸು (ಹಣ) ತೂರಿ ಸಿಳ್ಳೆ ಹಾಕಿ ಕುಣಿಯುವ ಹುಡುಗರು, ಅದೇ ನಾಟ್ಯ ವಸ್ತು ವಿಷಯದ ಒಂದು ದೃಶ್ಯಕಲಾಕೃತಿಯನ್ನು ಕಂಡಾಗ ಹಾಗೆ ಕಾಸು ತೂರಿ ಸಿಳ್ಳೆ ಹಾಕಿ ಏಕೆ ಕುಣಿಯುವುದಿಲ್ಲ? ಎಂದು ಪ್ರಶ್ನಿಸಿಕೊಂಡಾಗ ದೃಶ್ಯಕಲೆಗಳಲ್ಲಿ ನವರಸಗಳ ನಿಷ್ಪತ್ತಿ ಸಾಧ್ಯವೇ? ಎಂಬುದಕ್ಕೆ ಉತ್ತರ ಸಿಗುತ್ತದೆ.

"ಶುದ್ಧ ಸಂಗೀತದಲ್ಲಿ ಹಾಸ್ಯರಸ ಉಂಟಾಗಲು ಸಾಧ್ಯವಿಲ್ಲ. ಇದುವರೆಗಿನ ಯಾವುದೇ ಶಾಸ್ತ್ರೀಯ ಸಂಗೀತಗಾರರು ಶುದ್ಧ ಸಂಗೀತದಲ್ಲಿ ಹಾಸ್ಯ ರಸವನ್ನು ಅಭಿವ್ಯಕ್ತಿಸಿಲ್ಲ. ಅಭಿವ್ಯಕ್ತಿಸಲು ಸಾಧ್ಯವೂ ಇಲ್ಲ" (ಸಿನಿಮಾ ಹಾಡು, ಭಾವಗೀತೆಗಳು ಶುದ್ಧ ಸಂಗೀತಗಳಲ್ಲ) ಈ ವಿಷಯ ಈಗ ಸಂಗೀತ ಕ್ಷೇತ್ರದಲ್ಲಿಯೂ ಚರ್ಚೆಯಾಗುತ್ತದೆ. ಭರತಮುನಿಯೇ ನಾಟ್ಯಶಾಸ್ತ್ರದಲ್ಲಿ ಸಂಗೀತದಲ್ಲಿ ಎಂಟು (ಭರತನ ಕಾಲದಲ್ಲಿ ಒಂಭತ್ತು ರಸಗಳಿರಲಿಲ್ಲ) ರಸಗಳು ಉಂಟಾಗಲು ಸಾಧ್ಯವಿಲ್ಲವೆಂದು ಹೇಳಿದ್ದಾನೆ. ಸಂಗೀತದಲ್ಲಿ ಕೇವಲ ನಾಲ್ಕೇ ನಾಲ್ಕು ರಸಗಳು. (ಶೃಂಗಾರ, ಕರುಣ, ವೀರ ಮತ್ತು ಅದ್ಭುತ) ಉಂಟಾಗುತ್ತವೆ ಎಂದು ಹೇಳಿದ್ದಾನೆ. ಹಾಗೆಯೇ ದೃಶ್ಯಕಲೆಗಳಲ್ಲಿಯೂ ನವರಸಗಳು ಹುಟ್ಟುವುದಿಲ್ಲ. ಇಲ್ಲಿ ಒಂದೇ ರಸ. ಅದು ಸೌಂದರ್ಯರಸ.

ಸ್ಥಾಯಿಭಾವಗಳಿಂದ ಮಾತ್ರ ರಸಗಳ ಉತ್ಪತ್ತಿ ಸಾಧ್ಯವೆಂದು ಭರತಮುನಿ ಹೇಳಿದ್ದಾನೆ. ಆದರೆ ದೃಶ್ಯಕಲೆಗಳಲ್ಲಿ ಸ್ಥಾಯಿಭಾವಗಳು ಉಂಟಾಗುವುದಿಲ್ಲ. ಇಲ್ಲಿ ಎಲ್ಲವೂ ಸಂಚಾರಿ ಭಾವಗಳೇ. ಸಂಚಾರಿ ಭಾವಗಳಿಂದ ರಸೋತ್ಪತ್ತಿಯಿಲ್ಲ, ಇದನ್ನು ಎಲ್ಲಾ ಮೀಮಾಂಸಕರೂ ಒಪ್ಪಿಕೊಂಡಿದ್ದಾರೆ. ಆದ್ದರಿಂದ ದೃಶ್ಯಕಲೆಗಳಲ್ಲಿ ಸೌಂದರ್ಯವೊಂದನ್ನು ಉಳಿದು ಮಿಕ್ಕ ಯಾವುದೇ ಭಾವಗಳು ಸ್ಥಾಯಿಯಾಗಿ ನಿಲ್ಲುವುದಿಲ್ಲ. ಏಕೆಂದರೆ ಇಲ್ಲಿ ವಾಚಿಕ, ಆಂಗಿಕ ಹಾಗೂ ಆಹಾರ್ಯಗಳಿಲ್ಲ. ಇದರಿಂದ ದೃಶ್ಯಕಲೆಗಳಲ್ಲಿ ಉಂಟಾಗುವ ಶೃಂಗಾರವೊಂದನ್ನು ಬಿಟ್ಟು, ಉಳಿದ ಯಾವುದೇ ಸ್ಥಾಯೀಭಾವಗಳು ಸಂಚಾರಿಯಾಗಿ ಹೊರಟುಹೋಗುತ್ತವೆ. ಇಲ್ಲಿ ಸ್ಥಾಯಿಯಾಗಿ ನಿಲ್ಲುವುದು ಸೌಂದರ್ಯ ಮಾತ್ರ. ಇದರಿಂದ ಸೌಂದರ್ಯ ರಸ ಮಾತ್ರ ಇಲ್ಲಿ ಏಕೈಕ ರಸವಾಗಿದೆ.

❑

ಧಾರವಾಡದಲ್ಲಿ ನಡೆದ 'ದೃಶ್ಯಕಲೆ-ಶಿಕ್ಷಣ ಮತ್ತು ಸಂಶೋಧನೆ' ವಿಚಾರಸಂಕಿರಣದ ಛಾಯಾಚಿತ್ರಾವಳಿ...




'ದೃಶ್ಯಕಲೆ-ಶಿಕ್ಷಣ ಮತ್ತು ಸಂಶೋಧನೆ' ವಿಚಾರಸಂಕಿರಣದ ಉದ್ಘಾಟನೆ ಹಿರಿಯ ಲೇಖಕ ಪ್ರೊ. ಷ.ಶೆಟ್ಟರ್ ಅವರಿಂದ. ಹಿರಿಯ ಕಲಾವಿದರಾದ ಎಂ.ಆರ್.ಬಾಳೀಕಾಯಿ, ಅಕಾಡೆಮಿ ಅಧ್ಯಕ್ಷರಾದ ಡಾ. ಎಂ.ಎಸ್.ಮೂರ್ತಿ, ರಿಜಿಸ್ಟ್ರಾರ್ ಹೆಚ್.ವಿ.ಇಂದ್ರಮ್ಮ ಮತ್ತಿತರರ ಉಪಸ್ಥಿತಿ.



ಪ್ರೊ. ಷ.ಶೆಟ್ಟರ್ ಅವರ ಮಾತಿನ ವೈಖರಿ.




ಹಿರಿಯ ಕಲಾವಿದ ಎಂ.ಆರ್.ಬಾಳೀಕಾಯಿ ಅವರಿಂದ ಹಿತವಚನ.




ಅಕಾಡೆಮಿ ಅಧ್ಯಕ್ಷರ ಮಾತಿನ ಲಹರಿ.




ಡಾ. ಶ್ರೀಧರ್ ಮೂರ್ತಿ ಅವರಿಂದ ಪ್ರಬಂಧ ಮಂಡನೆ.



ಶ್ರೀಮತಿ ಗೋಮತಿ ಅವರಿಂದ ಭಾರತೀಯ ಕಲಾಶಿಕ್ಷಣ-ಸಮಕಾಲೀನ ಪ್ರಯೋಗಗಳ ವಿವರಣೆ.



ವಿಚಾರಸಂಕಿರಣಕ್ಕೆ ಸಾಕ್ಷಿಯಾದ ಪ್ರೇಕ್ಷಕರ ಸಮೂಹ.



ಸಂವಾದವನ್ನು ಅರ್ಥಪೂರ್ಣವಾಗಿಸಿದ ಕಲಾಸಮೂಹ.

# ವಿಚಾರ ಸಂಕಿರಣದ ಹಾದಿ





ಕರ್ನಾಟಕ ಸರ್ಕಾರ




ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು

ವಿಚಾರ ಸಂಕಿರಣ

## "ದೃಶ್ಯಕಲೆ – ಶಿಕ್ಷಣ ಮತ್ತು ಸಂಶೋಧನೆ"

ದಿನಾಂಕ: ೦೫ ರಿಂದ ೦೮ ಜುಲೈ ೨೦೧೬ । ಸ್ಥಳ : "ಆಲೂರು ವೆಂಕಟರಾಯರ ಟ್ರಸ್ಟ್", ಪಿ.ಬಿ. ರಸ್ತೆ, ಧಾರವಾಡ

**ಉದ್ಘಾಟನಾ ಸಮಾರಂಭ**

ದಿನಾಂಕ: 05-07-2016, ಬೆಳಗ್ಗೆ 11.00

ಉದ್ಘಾಟನೆ

**ಪ್ರೊ. ಷ. ಶೆಟ್ಟರ್**

ಖ್ಯಾತ ಲೇಖಕರು, ಬೆಂಗಳೂರು

ಮುಖ್ಯಅತಿಥಿ

**ಶ್ರೀ ಎಂ.ಆರ್. ಬಾಳೀಕಾಯಿ**

ಹಿರಿಯ ಕಲಾವಿದರು, ಧಾರವಾಡ

ಅಧ್ಯಕ್ಷತೆ

**ಡಾ. ಎಂ.ಎಸ್. ಮೂರ್ತಿ**

ಅಧ್ಯಕ್ಷರು,
ಕರ್ನಾಟಕ ಲಲಿತಕಲಾ ಅಕಾಡೆಮಿ

Karnataka Lalithakala Academy
2nd Floor, Kannada Bhavan, J.C. Road, Bangaluru - 560 002
P: 080 2248 0297 E: kla.karnataka@gmail.com, WWW. lalitkalakarnataka.org

# ಪ್ರಬಂಧ ಮಂಡನೆ–ಸಂವಾದ

ದಿನಾಂಕ : 05-07-2016, ಮಂಗಳವಾರ

ಗೋಷ್ಠಿ - 1 : ಮಧ್ಯಾಹ್ನ 12.00 ರಿಂದ 12.45

**ಡಾ. ಆರ್.ಹೆಚ್. ಕುಲಕರ್ಣಿ**

ವಿಷಯ :

**ದೃಶ್ಯಕಲೆಯ - ಸಂಶೋದನೆಯಲ್ಲಿ ಕಲಾ ಇತಿಹಾಸದ ಸಾಧ್ಯತೆಗಳು**

**ಊಟದ ಬಿಡುವು 1.00 ರಿಂದ 2.00**

ಗೋಷ್ಠಿ - 2 : ಮಧ್ಯಾಹ್ನ 2.00 ರಿಂದ 2.45

**ಡಾ. ಉನ್ನಿಕೃಷ್ಣನ್ ಕೆ.**

ವಿಷಯ :

**ಕಲೆ ಮತ್ತು ಶೈಕ್ಷಣಿಕ ಆಯಾಮಗಳು**

**ಚಹಾ ವಿರಾಮ 3.00 ರಿಂದ 3.15**

ಗೋಷ್ಠಿ - 3 : ಮಧ್ಯಾಹ್ನ 3.15 ರಿಂದ 4.00

**ಡಾ. ಶ್ರೀಧರ್ ಮೂರ್ತಿ**

ವಿಷಯ :

**ಕಲಾ ಶಿಕ್ಷಣದಲ್ಲಿ ಶೃಂಗಾರ ರಸದ ಮಹತ್ವ**

ದಿನಾಂಕ : 06-07-2016, ಬುಧವಾರ

ಗೋಷ್ಠಿ - 4 । ಬೆಳಗ್ಗೆ 10.00 ರಿಂದ 10.45

**ಶ್ರೀಮತಿ ಗೋಮತಿ**

ವಿಷಯ :

**ಭಾರತೀಯ ಕಲಾ ಶಿಕ್ಷಣ-ಸಮಕಾಲೀನ ಪ್ರಯೋಗಗಳು**

**ಚಹಾ ವಿರಾಮ 11 ರಿಂದ 11.15**

ಗೋಷ್ಠಿ - 5 । ಬೆಳಗ್ಗೆ 11.15 ರಿಂದ 12.00

**ಡಾ. ಎಸ್.ಸಿ. ಪಾಟೀಲ್**

ವಿಷಯ :

**ದೃಶ್ಯಕಲೆಯ ಸಂಶೋಧನಾತ್ಮಕ ನೆಲೆಗಳು**

ಗೋಷ್ಠಿ - 6 । 12.15 ರಿಂದ 1.00

**ಡಾ. ಡಿ.ಎ. ಉಪಾಧ್ಯಾ**

ವಿಷಯ :

**ಲಲಿತಕಲೆ – ತೌಲನಿಕ ಚಿಂತನೆ**

**ಊಟದ ಬಿಡುವು 1.15 ರಿಂದ 2.00**

## ಸಂವಾದಕರು

ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ಕಲಬುರಗಿ
ಶ್ರೀ ಬಸವರಾಜ ವಿ. ಕಮಾಜ, ಕಲಬುರಗಿ
ಶ್ರೀ ಜಿ. ಮಾರುತಿ, ಧಾರವಾಡ
ಡಾ. ಕೃಷ್ಣೇಗೌಡ, ಹಂಪಿ
ಡಾ. ಶಶಿಕಲಾ ಹೂಗಾರ್, ವಿಜಯಪುರ
ಶ್ರೀ ಗೋಪಾಲ್ ಕಮ್ಮಾರ್, ಬೆಳಗಾವಿ
ಶ್ರೀ ಅನಿಲ್ ಪ್ರಕಾಶ್, ಬೆಳಗಾವಿ
ಶ್ರೀ ಡಿ.ಎಂ. ಬಡಿಗೇರ, ಧಾರವಾಡ
ಶ್ರೀಮತಿ ರೇಣುಕಾ ಕೇಸರಮಡು, ತುಮಕೂರು
ಡಾ. ವಿಶ್ವೇಶ್ವರಿ ಎಸ್ ತಿವಾರಿ, ಕಲಬುರಗಿ
ಶ್ರೀ ಷಹಜಹಾನ ಮುದಕವಿ, ಹಾವೇರಿ
ಶ್ರೀ ಕೆ.ವಿ. ಕಾಳೆ, ಸಂಡೂರು
ಶ್ರೀ ನಟರಾಜ್ ಶಿಲ್ಪಿ, ಕಲಬುರಗಿ
ಶ್ರೀ ಬಸವರಾಜ್ ಹೆಚ್. ಕುರಿಯವರ, ಧಾರವಾಡ
ಶ್ರೀ ಮೋಹನ್ ಸೀತನೂರು, ಕಲಬುರಗಿ
ಶ್ರೀ ಎನ್.ಎನ್. ಚಿನ್ನಣ್ಣನವರ, ಧಾರವಾಡ
ಶ್ರೀಮತಿ ಚೈತ್ರ ಬಹುರೂಪಿ, ಧಾರವಾಡ
ಕು. ಸುನಿತಾ ಎಂ. ಹಿರೇಮನಿ, ಗದಗ
ಕು. ಮಿನಾಕ್ಷೀ ವಿ. ಸೋಮನಕಟ್ಟಿ, ಗದಗ
ಶ್ರೀ ದಯನಾಂದ ಹಿರೇಮಠ್, ಧಾರವಾಡ
ಶ್ರೀ ಕೆ. ವೈ. ಚೌಗುಲೆ, ಧಾರವಾಡ
ಶ್ರೀ ವೆಂಕಟೇಶ್ ಎಂ. ದಾವಣಗೆರೆ
ಶ್ರೀ ಕುಮಾರ್ ವೈ. ದಾವಣಗೆರೆ
ಕು. ಅನೀಸ್ ಫಾತಿಮಾ, ರಾಯಚೂರು
ಡಾ. ರವಿನಾಯಕ್, ವಿಜಯಪುರ
ಶ್ರೀ ಕೆ.ಕೆ. ಮಕಾಳಿ, ಹಂಪಿ
ಡಾ. ಶಾಹೀದ್ ಪಾಷ, ಕಲಬುರಗಿ
ಶ್ರೀ ವಿಠಲ್ ರೆಡ್ಡಿ ಚುಳಕಿ, ಮೈಸೂರು
ಶ್ರೀ ಬಸವರಾಜ ಎಲ್. ಜಾನೆ, ಕಲಬುರಗಿ
ಶ್ರೀ ಶಿವನಾಂದ ಕೆ. ಪತ್ತಾರ, ಧಾರವಾಡ
ಶ್ರೀ ಎಫ್.ವಿ. ಚಿಕ್ಕಮಠ್, ಧಾರವಾಡ
ಶ್ರೀ ಪಿ.ಜಿ. ಬಂಡಿ, ಗದಗ
ಡಾ. ಸಂತೋಷ್ ಕುಲಕರ್ಣಿ, ದಾವಣಗೆರೆ
ಡಾ. ಗಿರೀಶ್ ಕುಮಾರ್, ದಾವಣಗೆರೆ
ಶ್ರೀ ಜಯರಾಜ್ ಚಿಕ್ಕ ಪಾಟೀಲ್, ದಾವಣಗೆರೆ
ಶ್ರೀ ಬಸವರಾಜ್ ನೆಲಗೇರಿ, ಗದಗ
ಶ್ರೀ ಎ. ಎಸ್. ಕಲ್ಲೋಳಿಕರ್
ಶ್ರೀ ದಿಲೀಪ್ ಕುಮಾರ್ ಕಾಳೆ, ಬೆಳಗಾವಿ
ಶ್ರೀ ಭಾರತಿ ಸಿ. ಸರಗಣಾಚಾರಿ, ಬಾದಾಮಿ
ಶ್ರೀ ಮಹಾದೇವ ಮಾ ಜಗತಾಪ, ಗುಳೇದಗುಡ್ಡ
ಶ್ರೀ ಸಿ.ಸಿ. ಬಾರಕೇರ್, ಧಾರವಾಡ
ಶ್ರೀ ಎನ್.ಎಸ್. ನಾಯಕ್, ಧಾರವಾಡ
ಡಾ. ಸಂತೋಷ್ ಚಲವಾದಿ, ವಿಜಯಪುರ
ಶ್ರೀ ಜಿ.ಎಸ್. ಭೂಸಗೊಂಡ, ವಿಜಯಪುರ
ಶ್ರೀ ಟಿ.ಪಿ. ಲಮಾಣಿ, ಬದಾಮಿ
ಶ್ರೀಮತಿ ತುಳಸಿ ಜಿ. ಚವ್ಹಾಣ, ಗದಗ
ಶ್ರೀ ಸಂಜೀವ್ ಕಾಳೆ, ಧಾರವಾಡ
ಶ್ರೀ ಬಸವರಾಜ್ ಮೇತ್ರಿ, ಸೇಡಂ
ಶ್ರೀಮತಿ ಉಮಾ ಕಾತರಕಿ, ಬಾಗಲಕೋಟೆ
ಶ್ರೀ ಕೆ. ಪಿ. ತಳವಾರ್, ಹುಬ್ಬಳ್ಳಿ
ಶ್ರೀ ಪ್ರದೀಪ್‌ಕುಮಾರ್ ಎ.ಎಸ್., ದಾವಣಗೆರೆ
ಶ್ರೀ ಎಂ.ಜಿ. ಬಂಗ್ಲೆವಾಲೆ, ಹುಬ್ಬಳ್ಳಿ
ಶ್ರೀ ಶಿವಾನಂದ್ ಬಸವಂತಪ್ಪ, ಬೆಂಗಳೂರು
ಡಾ. ಸುಭಾಷ್ ಕಮ್ಮಾರ, ಬೆಂಗಳೂರು
ಶ್ರೀ ಚಂದ್ರಹಾಸ ವ್ಹಾಹ್ ಜಾಲಿಹಾಳ, ಕಲಬುರಗಿ
ಶ್ರೀ ಮನು ಚಕ್ರವರ್ತಿ ಕೆ.ಎನ್., ತುಮಕೂರು
ಶ್ರೀ ದೇವೇಂದ್ರಪ್ಪ, ರಾಯಚೂರು
ಕು. ಸಂಗಮ ವಸಂತ ದೊಡ್ಡಮನಿ, ಬೆಳಗಾವಿ

# ಸಮಾರೋಪ

ದಿನಾಂಕ: 06-06-2016, ಬುಧವಾರ, ಮಧ್ಯಾಹ್ನ 3.30 ಗಂಟೆಗೆ
ಸ್ಥಳ : ಆಲೂರು ವೆಂಕಟರಾಯರ ಟ್ರಸ್ಟ್, ಡಿ.ಸಿ. ಕಾಂಪೌಂಡ್, ಧಾರವಾಡ

ಸಮಾರೋಪದ ನುಡಿ
**ಡಾ. ವಿ.ಜಿ. ಅಂದಾನಿ**
ಮಾಜಿ ಅಧ್ಯಕ್ಷರು, ಕರ್ನಾಟಕ ಲಲಿತಕಲಾ ಅಕಾಡೆಮಿ

ಅಧ್ಯಕ್ಷತೆ
**ಡಾ. ಎಂ.ಎಸ್. ಮೂರ್ತಿ**
ಅಧ್ಯಕ್ಷರು,
ಕರ್ನಾಟಕ ಲಲಿತಕಲಾ ಅಕಾಡೆಮಿ

## ತಮಗೆ ಆತ್ಮೀಯ ಸ್ವಾಗತ

**ಜಿ. ಕೊಟ್ರಪ್ಪ**
ರಿಜಿಸ್ಟ್ರಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು

**ಡಾ. ಡಿ. ಎಲ್. ಚವಾಣ್**
ಸದಸ್ಯ ಸಂಚಾಲಕರು
ಕರ್ನಾಟಕ ಲಲಿತಕಲಾ ಅಕಾಡೆಮಿ, ಗದಗ

**ಅಧ್ಯಕ್ಷರು ಹಾಗೂ ಸದಸ್ಯರು,**
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು



ಹಿರಿಯ ಕಲಾವಿದ

**ಎಂ.ಎಫ್. ಹುಸೇನ್** ಅವರ ಕಲಾಕೃತಿ

(ಕರ್ನಾಟಕ ಲಲಿತಕಲಾ ಅಕಾಡೆಮಿಯ ಸಂಗ್ರಹದಲ್ಲಿರುವ ಕಲಾಕೃತಿ)